# ಚಂದಮಾಮ

## ನವಂಬರ್ 1979


★

## ಈ ಸಂಚಿಕೆಯಲ್ಲಿ



★

# ಚಂದಮಾಮ

ಸಂಸ್ಥಾಪಕರು : 'ಚಕ್ರಪಾಣಿ'
ಸಂಚಾಲಕರು : ನಾಗಿರೆಡ್ಡಿ

---

ವಿವಾಹ ಸಮಸ್ಯೆ ಪುರಾಣ ಕಾಲದಲ್ಲಿಯೇ ತಲೆ ದೋರಿದಂತಹುದು. ಬೇರೆ ಬೇರೆ ಧರ್ಮಗಳವರು ವಿವಾಹವಾಗಿ ತಂದೆಯ ವಾರಸತ್ವಕ್ಕಾಗಿ ಹೋರಾಡಿದರು. ಬಾಲಕನೊಬ್ಬ ಆ ವಾರಸತ್ವಕ್ಕೆ ತಕ್ಕ ಅರ್ಹತೆಯನ್ನು ಪಡೆಯಲು ತಕ್ಕ ಸಾಧನೆಗಳನ್ನು ಮಾಡಿ ಕೃತಾರ್ಥನಾದ ಚೆಂದವನ್ನು ಈ ಸಂಚಿಕೆಯ ಪುರಾಣಬಾಲನು ತೋರಿಸಿ ಕೊಡುತ್ತಾನೆ. ಯಾರನ್ನು ಕೇಳಿದರೆ ಯಾವ ಬಗೆಯ ಉಪದೇಶ ಸಿಗುವುದೆಂಬುದನ್ನೂ ಇದರಲ್ಲಿ ಕಾಣಬಹುದು.

### ಅಮರವಾಣಿ

ಪ್ರಳಯೇ ಭಿನ್ನ ಮರ್ಯಾದಾ ಭವಂತಿ ಕಿಲ ಸಾಗರಾಃ
ಮರ್ಯಾದಾ ಭೇದಮಿಚ್ಛಂತಿ ಪ್ರಳಯೇಽಪಿ ನ ಸಾಧವಃ

ಪ್ರಳಯ ಬಂದಾಗ ಸಮುದ್ರಗಳು ಮೇರೆಯನ್ನು ಅತಿಕ್ರಮಿಸಿ ಬಿಡುತ್ತವೆ; ಆದರೆ ಸಜ್ಜನರು ಪ್ರಳಯವೇ ಬಂದರೂ ತಮ್ಮ ಮರ್ಯಾದೆಯನ್ನು ಅತಿಕ್ರಮಿಸಲಾರರು.

---

ಸಂಪುಟ : ೬೩ ನವಂಬರ್ ೭೯ ಸಂಚಿಕೆ : ೫

ಬಿಡಿ ಪ್ರತಿ ರೂ. ೧-೫೦ :: ವಾರ್ಷಿಕ ಚಂದಾ ರೂ. ೧೮-೦೦

CHITRA




**ಬಿ. ಎಲ್. ರಾಧಿಕ, ಭೀಮವರಂ (ಆಂಧ್ರ)**

ಪ್ರ: ಮೇಲೆ ಹೋದ ಹಾಗೆ ಆಕ್ಸಿಜನ್ ಇರುವುದಿಲ್ಲವೆಂದು ಶಾಸ್ತ್ರಜ್ಞರು ಹೇಳುತ್ತಾರೆ. ಆಕ್ಸಿಜನ್ ಇಲ್ಲದಿದ್ದರೆ ಬೆಂಕಿ ಉರಿಯುವುದಿಲ್ಲವಷ್ಟೆ? ಹಾಗಿರುವಾಗ ಅಗ್ನಿಗುಂಡವಾಗಿರುವ ಸೂರ್ಯನು ಹೇಗೆ ಪ್ರಕಾಶಿಸುತ್ತಾನೆ?

ಉ: ಈ ಪ್ರಶ್ನೆಯಲ್ಲಿ ಎರಡು ಅಪೋಹಗಳಿವೆ. ಒಂದು, ಮೇಲೆ ಮೇಲೆ ಹೋದ ಹಾಗೆ ಗಾಳಿಯೇ ತೆಳ್ಳಗಾಗುತ್ತಾ ಹೋಗುತ್ತದೆ. ಅದರೊಂದಿಗೆ ಗಾಳಿಯಲ್ಲಿರುವ ಪ್ರಾಣವಾಯು (ಆಕ್ಸಿಜನ್) ಕೂಡಾ ತಗ್ಗಿ ಹೋಗುತ್ತದೆ. ಎರಡು, ಭೂಮಿಯ ಸುತ್ತಲೂ ಇರುವ ಗಾಳಿಯು ಪೊರೆ ಕೆಲವು ನೂರು ಮೈಲುಗಳಿಗೆ ಮೇಲೆ ದಾಟಲಾರದು. ಲಕ್ಷಗಟ್ಟಳೆ ಮೈಲು ದೂರವಿರುವ ಸೂರ್ಯನು ಉರಿಯಲಿಕ್ಕೆ ಭೂಮಿಯ ಕಡೆಯಿಂದ ಆಕ್ಸಿಜನ್ ಹೋಗಿ ಸೇರುವ ಮಾತು ಅಸಂಭವ. ಅಸಲು ಮುಖ್ಯ ಸಂಗತಿ ಮೂರನೆಯದು. ಉರಿಸಲ್ಪಡುವುದು ಬೇರೆ, ಉರಿಯುವುದು ಬೇರೆ. ಒಂದನ್ನು ಜ್ವಲನವೆಂದೂ ಎರಡನೆಯದನ್ನು ಪ್ರಜ್ವಲನವೆಂದೂ ಹೇಳಬಹುದು. ಉರಿಸಲ್ಪಡುವುದಕ್ಕೆ (ಜ್ವಲನಕ್ಕೆ) ಆಕ್ಸಿಜನ್‌ಬೇಕು, ಉರಿಯುವುದಕ್ಕೆ ಬೇಡ. ವಿದ್ಯುದ್ದೀಪಗಳಲ್ಲಿ ಲೋಹದ ಸರಿಗೆಗಳು ಬೆಳಗುತ್ತವೆ, ಉರಿಸಲ್ಪಡುವುದಿಲ್ಲ. ಉರಿಸಲ್ಪಡುವ ವಸ್ತುಗಳು ಉರಿಯುವುದು ಪೂರ್ತಿಯಾದ ಮೇಲೆ ಬೂದಿಯಾಗುತ್ತವೆ. ಕುಲಿಮೆಯಲ್ಲಿ ಕಾಯಿಸಿದರೆ ಕಬ್ಬಿಣವು ಕೆಂಪಗಾಗುತ್ತದೆ. ಇನ್ನೂ ಕಾಯಿಸಿದರೆ ತೆಳ್ಳಗಾಗಿ ಅಮಿತ ಉಷ್ಣೋಗ್ರತೆಯಿಂದ ಬೆಳ್ಳಗಾಗಿ ಪ್ರಕಾಶಿಸುತ್ತ ನೀರಾಗಿಬಿಡುತ್ತದೆ. ಸೂರ್ಯನಲ್ಲಿ ಇರುವ ಪದಾರ್ಥವು ಹಲವು ಸಾವಿರ ಡಿಗ್ರಿ ಉಷ್ಣೋಗ್ರತೆಯಿಂದ ಪ್ರಜ್ವಲಿಸುತ್ತದೆ. ಈ ಪ್ರಜ್ವಲನಕ್ಕೆ ಅಗತ್ಯವಾದ ಬಿಸಿ ಅಣುಶಕ್ತಿಯಿಂದ ಬರುವುದೆನ್ನುತ್ತಾರೆ. ಸೂರ್ಯನಲ್ಲಿ ಯಾವುದೂ ಉರಿಸಲ್ಪಡುವುದಿಲ್ಲ.

**ಕೆ. ಶೇಷಾದ್ರಿ ರಾವು, ದುಗ್ಗಿರಾಲ, (ಆಂಧ್ರ)**

ಪ್ರ: ನಾವು ವಿಮಾನದಲ್ಲಿ ನೆಟ್ಟಗೆ ಆಕಾಶಕ್ಕೆ ಹಾರಿ ಭೂಮಿಯ ಆಕರ್ಷಣೆಯ ಪರಿಧಿಯನ್ನು ದಾಟಿ ಹೋಗಿ ಅಲ್ಲಿ ಹನ್ನೆರಡು ಗಂಟೆ ಹೊತ್ತು ಇದ್ದು, ನೆಟ್ಟಗೆ ಮತ್ತೆ ಕೆಳಕ್ಕೆ ಇಳಿದರೆ, ನಾವು ಇನ್ನೊಂದು ಪ್ರದೇಶದಲ್ಲಿ ಇಳಿಯುತ್ತೇವೆಯೆ? ಅಥವಾ ಹೊರಟ ಸ್ಥಳದಲ್ಲೇ ಇಳಿಯುತ್ತೇವೆಯೆ?

ಉ: ಭೂಮಿಯ ಆಕರ್ಷಣೆಯ ಪರಿಧಿಯನ್ನು ದಾಟಿ ಹೋಗಲು ಯಾವ ವಿಮಾನವೂ ಉಪಯೋಗವಿಲ್ಲ. ಅದಕ್ಕೆ ರಾಕೆಟ್ ಆಗಬೇಕು. ಭೂಮಿಯ ಆಕರ್ಷಣೆಯ ಪರಿಧಿ ದಾಟಿದ ಮೇಲೆ, ಬಹುಶಃ ಚಂದ್ರನ ಆಕರ್ಷಣೆಗೆ ಗುರಿಯಾಗುತ್ತೇವೆ. ಹನ್ನೆರಡು ಗಂಟೆಗಳ ಅನಂತರ ಬಹುಶಃ ನಾವು ಚಂದ್ರನ ಸುತ್ತಲೂ ಗಿರಿಗಿರಿ ಸುತ್ತುತ್ತಾ ಇರುತ್ತೇವೆ. ಮತ್ತೆ ಭೂಮಿಯ ಮೇಲೆ ಬರ ಬೇಕಾದರೆ ಚಂದ್ರನ ಆಕರ್ಷಣೆಯಿಂದ ಹೊರಬೀಳಲು, ಮತ್ತೆ ರಾಕೆಟ್ಟನ್ನೇ ಶರಣಾಗ ಬೇಕಾಗುತ್ತದೆ!




೭೬

ಕಲಿತು ಪಂಡಿತರಾದ ಆ ಮೂಢರು ಎರಡು ಪ್ರಾಣಿಗಳನ್ನೂ ಕೂಡಿಸಿ ಅವುಗಳನ್ನು ನಡೆಯಿಸಲು ಪ್ರಯತ್ನಿಸಿದರು. ಅವುಗಳಿಗೆ ಕದಲಲಿಕ್ಕೂ ಸಾಧ್ಯವಾಗಲಿಲ್ಲ. ಆಗ ಆ ಪಂಡಿತರಿಗೆ ತಮ್ಮ ಗುರುಗಳು ಆಗಾಗ ಹೇಳುವ "ಕತ್ತೆಗೆ ಲತ್ತೆಯಪೆಟ್ಟು" ಎಂಬ ಮಾತು ನೆನಪಿಗೆಬಂತು. ಅಂತೆಯೇ ಕತ್ತೆಯನ್ನು ನಡೆಸಲು ಎರಡು ಪೆಟ್ಟುಕೊಟ್ಟರು. ಅದು ಕರ್ಕಶಧ್ವನಿ ತೆಗೆದು ಓಂಡ್ರಿಸ ತೊಡಗಿತು. ಕತ್ತೆಯ ಕೂಗನ್ನು ಕೇಳಿ ಅದರ ಯಜಮಾನನಾದ ಅಗಸರವನೂ, ಒಂಟೆಯ ಒಡೆಯನಾದ ವರ್ತಕನೂ ಬಂದು, ಪರಿಸ್ಥಿತಿಯನ್ನು ಅರ್ಥ ಮಾಡಿಕೊಂಡರು. ಅವರಿಬ್ಬರೂ ಸಿಟ್ಟಿನಿಂದ ಕೋಲು ದಂಟೆ ತೆಗೆದುಕೊಂಡು ನಾಲ್ವರು ಪಂಡಿತರ ಬೆನ್ನಿಗೂ ಏಟುಬಾರಿಸಲು, ಪಂಡಿತರು ನಾಲ್ವರೂ ದೂರ ಓಡಿದರು.

ಆಮೇಲೆ ನಾಲ್ವರೂ ಒಂದೆಡೆ ನಿಂತು ಬೆನ್ನು ತಡವುತ್ತ, "ನಮ್ಮನ್ನು ಅವರಿಬ್ಬರೂ ಹೊಡೆದರಷ್ಟೆ? ಅವರ ಉದ್ದೇಶ ಏನಿರಬಹುದು.?" ಎಂದು ಒಬ್ಬ ಪಂಡಿತನು ಬಾಯಿಬಿಟ್ಟ.

"ಅವರು ಮೂರ್ಖರು. ಮೂರ್ಖರ ಕಾರ್ಯಗಳಿಗೆ ಉದ್ದೇಶವಿರುವುದಿಲ್ಲ. ಪಂಡಿತರ ಕೃತಿಗಳು ಅವರಿಗೆ ಅರ್ಥವಾಗುವುದಿಲ್ಲ. ಅದಕ್ಕಾಗಿ ನಾವು ಮನಸ್ಸು ಕೆಡಿಸಿಕೊಳ್ಳಬಾರದು" ಎಂದ ಇನ್ನೊಬ್ಬ ಪಂಡಿತ. ಅಲ್ಲಿಂದ ಅವರು ಸ್ವಲ್ಪ ದೂರ ಮುಂದೆ ಹೋದರು. ಆಳವಾದ ನದಿಯೊಂದು ಅಡ್ಡ ಬಂದಿತು. ನದಿಯ ಬದಿಯಲ್ಲಿ ತುಂಬ ಜೊಂಡು ಹುಲ್ಲು ಬೆಳೆದಿತ್ತು. ನಡೂನದಿಯಲ್ಲಿ ಒಂದು ಎಲೆ ತೇಲುತ್ತಾ ಬರುತ್ತಿತ್ತು. ಅದನ್ನು ನೋಡಿ ಒಬ್ಬ ಪಂಡಿತನು "ಆಗಮಿಷ್ಯತಿ ಯತ್ಪತ್ರಂ ತದಸ್ಮಾಂಸ್ತಾರಯಿಷ್ಯತಿ" (ಆ ಬರುವ ಎಲೆ ನದಿಯನ್ನು ದಾಟಿಸುವಂತಹುದು) ಎಂದುಕೊಂಡು ಒಮ್ಮೆಗೇ ಆ ನದಿಯೊಳಗೆ ಹಾರಿದನು. ಅವನ ಕಾಲು ಕೆಸರಿನೊಳಗೆ ಇಳಿದು ಮೇಲಕ್ಕೆ ಬರಲಾಗದೆ ಕುತ್ತಿಗೆಯವರೆಗೂ ಮುಳುಗಿದನು.

ಆಗ ಮತ್ತೊಬ್ಬ ಪಂಡಿತನು ತನ್ನ ಪುಸ್ತಕ ತೆರೆದು "ಸರ್ವನಾಶೇ ಸಮುತ್ಪನ್ನೇ ಅರ್ಧಂ ತ್ಯಜತಿ ಪಂಡಿತಃ" ಎಂದು ಓದಿ, "ಎಲ್ಲವೂ ಹೋಗುವ ಪರಿಸ್ಥಿತಿಯಲ್ಲಿ



ಬುದ್ಧಿವಂತನು ಅರ್ಥವನ್ನಾದರೂ ದಕ್ಕಿಸಿಕೊಳ್ಳುತ್ತಾನೆ" ಎಂದು ಹೇಳಿಕೊಂಡು, ತರಕಾರಿ ಹಚ್ಚುವ ಕತ್ತಿಯಿಂದ ಕಷ್ಟಪಟ್ಟು ಚೊಂಡುಗಳ ನಡುವೆ ಹೂತು ಹೋದವನ ತಲೆಯನ್ನು ಕಡಿದುಬಿಟ್ಟನು. ಆ ತಲೆ ಮಾತಾಡದಿರುವುದನ್ನು ನೋಡಿ ಅಲ್ಲೇ ಹಾಕಿ, ನಾಲ್ವರೂ ನದಿಯನ್ನು ದಾಟಲಾಗದೆ, ಮತ್ತೊಂದು ದಿಕ್ಕಿಗೆ ನಡೆದು ಒಂದು ಗ್ರಾಮವನ್ನು ಸೇರಿದರು.

ಇವರು ಪಂಡಿತರೆಂದು ತಿಳಿದು ಆ ಗ್ರಾಮದ ಮೂವರು ಗೃಹಸ್ಥರು ಮೂವರನ್ನೂ ಬೇರೆ ಬೇರೆಯಾಗಿ ತಮ್ಮ ತಮ್ಮ ಮನೆಗೆ ಊಟಕ್ಕೆ ಕರೆದರು.

ಮೊದಲನೇ ಪಂಡಿತನಿಗೆ ಭೋಜನದಲ್ಲಿ ಶಾವಿಗೆ ಫೇಣಿಯನ್ನು ಬಡಿಸಿದರು. ಅದು ನೂಲು ನೂಲಾಗಿರುವುದನ್ನು ನೋಡಿ ಆ ಮೂಢನು "ದೀರ್ಘ ಸೂತ್ರೀ ವಿನಶ್ಯತಿ" (ದಾರಗಳು ನಾಶನವನ್ನುಂಟು ಮಾಡುತ್ತವೆ) ಎಂದುಕೊಂಡು ಊಟಮಾಡದೆ ಹೊರಟುಹೋದನು.

ಎರಡನೇ ಪಂಡಿತನಿಗೆ ಭೋಜನಕ್ಕೆ ಅಗಲವಾದ ಚಪಾತಿಯನ್ನು ಬಡಿಸಿದರು. ಅದನ್ನು ನೋಡಿ ಆ ಮೂಢನು "ಅತಿ ವಿಸ್ತಾರ ವಿಸ್ತೀರ್ಣ ತದ್ಭವೇನ್ನ ಚಿರಾಯುಷಂ" (ತುಂಬಾ ಅಗಲವಾದುವುಗಳು ಚಿರಾಯುಷ್ಯಕಾರಕವಲ್ಲ) ಎಂದುಕೊಂಡು ಊಟ ಬಿಟ್ಟು ಎದ್ದುಹೋದನು.

ಮೂರನೇ ಪಂಡಿತನನ್ನು ಕರೆದವರು ಅವನಿಗೆ ದೋಸೆಗಳನ್ನು ಬಡಿಸಿದರು. ದೋಸೆಗಳಲ್ಲಿರುವ ತೂತುಗಳನ್ನು ನೋಡಿ, "ಛಿದ್ರೇಷ್ವನರ್ಥಾ ಬಹುಲೀ ಭವಂತಿ" (ಛಿದ್ರಗಳಿಂದ ಅನೇಕ ಅನರ್ಥಗಳಾಗುತ್ತವೆ) ಎಂದು ಊಟಮಾಡದೆ ಎದ್ದುಹೋದನು.

ಈ ವಿಧವಾಗಿ ಪಂಡಿತರೆಂದು ಗೌರವಪಡೆದವರೇ ಲೋಕಜ್ಞಾನವಿಲ್ಲದವರಾದುದರಿಂದ, ಯಾವ ಸಂದರ್ಭದಲ್ಲಿಯೋ ಯಾವುದಕ್ಕಾಗಿಯೋ ಹೇಳಲ್ಪಟ್ಟ ವಾಕ್ಯಗಳನ್ನು, ಮತ್ತಾವುದಕ್ಕೋ ಹೊಂದಿಸಿ ನಗುವಿನ ಪಾಲಾದರು.

ಅತ್ಯಂತಲೋಭಿ ಈ ಕಥೆಯನ್ನು ಕೇಳಿ, "ನೀನು ಹೇಳಿದುದು ನಿಜವೇ ಆದರೂ, ನನಗೆ ತೋರುವುದೇನಂದರೆ, ಮನುಷ್ಯರು ಚೆನ್ನಾಗಲಿಕ್ಕೂ, ಹಾಳಾಗಲಿಕ್ಕೂ ಕಾರಣವು ಪಾಂಡಿತ್ಯವೂ ಅಲ್ಲ, ಲೋಕಜ್ಞಾನವೂ ಅಲ್ಲ; ಪೂರ್ತಿ ನಿಸ್ಸಹಾಯರಾದವರೂ ದಿಕ್ಕಿಲ್ಲದವರೂ ಯಾವಾಗಲೂ ದೇವರ ಕಟಾಕ್ಷದಿಂದ ಸುಖವಾಗಿ ಬದುಕುತ್ತಾರೆ. ಅತ್ಯಂತ ಬಲಶಾಲಿಗಳೂ, ಬೇಕಾದ ಹಾಗೆ ರಕ್ಷಣೆಗಳಿರುವವರೂ ಅಕಸ್ಮಾತ್ತಾಗಿ ದೈವೋಪಹತರಾಗಿ ಹೋಗುತ್ತಾರೆ. ನಡು ಕಾಡಿನಲ್ಲಿ ಸಾಯುವ ಹಾಗೆ ಬಿಟ್ಟ ಮನುಷ್ಯನು ದೇವರ ದಯವಿದ್ದರೆ ಬದುಕುತ್ತಾನೆ. ಎಲ್ಲಾ ಸೌಕರ್ಯಗಳಿದ್ದವನಾದರೂ ದೇವರ ದಯವಿಲ್ಲದೆ ಹೋದ ಪಕ್ಷದಲ್ಲಿ ಮನೆಯಲ್ಲಿಯೇ ಸತ್ತುಹೋಗುತ್ತಾನೆ. ಸಹಸ್ರಬುದ್ಧಿ, ಶತಬುದ್ಧಿ, ಏಕಬುದ್ಧಿ ಎಂಬವರ ಕಥೆಯಲ್ಲಿ, ತನಗಿಂತ ಬುದ್ಧಿವಂತರಾದವರಿಬ್ಬರೂ ನಾಶವಾಗಿ, ತಾನೊಬ್ಬನೇ

ಬದುಕಿರುವುದನ್ನು ಏಕಬುದ್ಧಿ ನೋಡುತ್ತಾನಲ್ಲಾ? ಈ ಪ್ರಪಂಚದಲ್ಲಿ ಮನುಷ್ಯನ ಪ್ರಾರಬ್ಧವನ್ನು ನಿರ್ಣಯಿಸುವುದು ವಿಧಿಯೇ ಹೊರತು ದುರಾಶೆಯೋ, ಪ್ರಪಂಚ ಜ್ಞಾನಶೂನ್ಯತೆಯೋ ಅಲ್ಲ." ಎಂದನು.

ಅತಿಲೋಭಿ ಆ ಕಥೆ ಏನೆಂದು ಕೇಳಲು ಅತ್ಯಂತ ಲೋಭಿ ಆ ಕಥೆಯನ್ನು ಹೇಳಲು ತೊಡಗಿದನು:

ಒಂದು ಕೊಳದಲ್ಲಿ ಅನೇಕ ಜಲಚರಗಳಿದ್ದುವು. ಅವುಗಳಲ್ಲಿ ಸಹಸ್ರಬುದ್ಧಿ, ಶತಬುದ್ಧಿ ಎಂಬ ಎರಡು ಮೀನುಗಳು, ಏಕಬುದ್ಧಿ ಎಂಬ ಕಪ್ಪೆಯೊಂದಿಗೆ ತುಂಬಾ ಸ್ನೇಹಮಾಡಿಕೊಂಡಿದ್ದುವು. ಅವು ಮೂರೂ ಪ್ರತಿದಿನ ಸಾಯಂಕಾಲ ತೀರದಲ್ಲಿ ಕೂಡಿಕೊಂಡು ಇಷ್ಟಾಗೋಷ್ಠಿ ನಡೆಸಿ ಮತ್ತೆ ನೀರಿನೊಳಗೆ ಹೊರಟು ಹೋಗುತ್ತಿದ್ದುವು.

ಒಂದು ದಿನ ಸಾಯಂಕಾಲ ಆ ಮೂರು ಸ್ನೇಹ ಪ್ರಾಣಿಗಳೂ ಮಾತಾಡಿಕೊಂಡಿರುವಾಗ ಕೆಲಮಂದಿ ಹಳ್ಳೀ ಜನರು ಬಲೆಯನ್ನು ಹಿಡಿದುಕೊಂಡು ಆ ಕಡೆಗೆ ಬಂದರು. ಅವರು ಕೊಳದ ಕಡೆಗೆ ನೋಡುತ್ತ, "ಇದರಲ್ಲಿ ನೀರು ತಗ್ಗಿಹೋಗಿದೆ. ಮೀನುಗಳು ತುಂಬಾ ಇವೆ. ನಾವು ನಾಳೆ ಬೆಳಿಗ್ಗೆ ಬಂದು ಮೀನುಗಳನ್ನೆಲ್ಲಾ ಹಿಡಿಯಬೇಕು" ಎಂದು ಹೇಳಿಕೊಂಡು ಹೊರಟುಹೋದರು.

ಸಿಡಿಲಿನಂತಹ ಅವರ ಮಾತುಗಳನ್ನು ಕೇಳಿ, ಈ ಮೂರು ಸ್ನೇಹಪ್ರಾಣಿಗಳು ತಮ್ಮ ಕರ್ತವ್ಯವೇನೆಂದು ಚರ್ಚೆಗೆ ತೊಡಗಿದುವು.

"ಸಹಸ್ರಬುದ್ಧೀ! ಶತಬುದ್ಧೀ! ಮುಂದೇನು ಗತಿ? ನಾವು ಈ ಕೊಳದಲ್ಲಿರಲು ಸಾಧ್ಯವೆ? ಬೇರೆಲ್ಲಿಗಾದರೂ ಹೋಗಲೇ ಬೇಕು. ಅಲ್ಲವೆ?" ಎಂದು ಏಕಬುದ್ಧಿ ಕಪ್ಪೆ ಕೇಳಿತು.

ಅದಕ್ಕೆ ಸಹಸ್ರಬುದ್ಧಿ ನಕ್ಕು, "ಮಿತ್ರಾ! ಬರೀ ಮಾತು ಕೇಳಿ ಹೆದರಬಾರದು. ಹಾವುಗಳೂ ದುಷ್ಟರೂ ಮಾಡುವ ಆಲೋಚನೆಗಳು ಯಾವಾಗಲೂ ಫಲಿ



ಸುವುದಿಲ್ಲ. ಇವತ್ತು ಹೇಳಿದ ಹಾಗೆ ನಾಳೆ ಮಾಡುವವರೂ ಇಲ್ಲ. ಆದುದರಿಂದಲೇ ಪ್ರಪಂಚವು ನಡೆಯುತ್ತಾ ಇದೆ. ಈ ಹಳ್ಳಿಯವರು ನಾಳೆ ಬಾರದೆ ಹೋಗಬಹುದು. ಹಾಗೊಂದು ವೇಳೆ ಬಂದರೂ ನಾನು ನನ್ನ ಬುದ್ಧಿ ಚಾತುರ್ಯಗಳಿಂದ ನನ್ನನ್ನು ರಕ್ಷಿಸಿಕೊಂಡು, ನಿನ್ನನ್ನು ಕೂಡಾ ರಕ್ಷಿಸಬಲ್ಲೆ. ನೀರಿನಲ್ಲಿ ಯಾವ ಯಾವ ರೀತಿಯಲ್ಲಿ ಸಂಚರಿಸಬಹುದೆಂಬ ವಿದ್ಯೆಯಲ್ಲಿ ನನ್ನನ್ನು ಮೀರಿಸುವವರಿಲ್ಲ. ಹೆದರಬೇಡ" ಎಂದಿತು.

ಸಹಸ್ರಬುದ್ಧಿಯ ಮಾತು ಕೇಳಿ ಶತಬುದ್ಧಿ ಮೀನು ಹರ್ಷದಿಂದ, "ಹೌದೌದು. ಸಹಸ್ರಬುದ್ಧಿ ಚೆನ್ನಾಗಿ ಹೇಳಿದೆ. ಬುದ್ಧಿವಂತರಿಗೆ ಪ್ರಪಂಚದಲ್ಲಿ ಅಸಾಧ್ಯವಾದುದು ಯಾವುದೂ ಇಲ್ಲ. ಅಸ್ತ್ರಧಾರಿಗಳಾದ ನಂದರನ್ನು ಚಾಣಕ್ಯನು ತನ್ನ ಬುದ್ಧಿ ಕುಶಲತೆಯಿಂದ ನಿರ್ಮೂಲಿಸಲಿಲ್ಲವೆ? ಸೂರ್ಯನೂ, ಗಾಳಿಯೂ ನುಸುಳಲಾಗದ ಸ್ಥಳಕ್ಕೆ ಕೂಡಾ ಬುದ್ಧಿ

ನುಸುಳುತ್ತದೆ. ಆದುದರಿಂದ ನಾವು ಈ ಹಳ್ಳಿಯವರ ಮಾತನ್ನು ಕೇಳಿ, ನಮ್ಮ ಜನ್ಮ ಸ್ಥಳವನ್ನು, ನಮ್ಮ ತಾತ ಮುತ್ತಾತರ ಕಾಲದಿಂದಿರುವ ಈ ಕೊಳವನ್ನು ಬಿಟ್ಟು ಹೋಗುವುದು ಒಳಿಯದಲ್ಲ. ಜನ್ಮ ಸ್ಥಳದಲ್ಲಿರುವ ಸುಖವು ಸ್ವಲ್ಪ ಮಾತ್ರವಾದರೂ, ಸ್ವರ್ಗ ಸುಖಗಳು ಕೂಡಾ ಅದಕ್ಕೆ ಸಾಟಿಯಲ್ಲವೆಂದು ದೊಡ್ಡವರು ಹೇಳುತ್ತಾರೆ. ನಾವು ಈ ಕೊಳವನ್ನು ಬಿಟ್ಟು ಹೋಗ ಬೇಕಾಗಿಲ್ಲ. ಅಂಥಾ ಸ್ಥಿತಿ ಬಂದರೆ ಕಾಲುವೆಗಳೊಳಗೆ ತೂರಿ ಗದ್ದೆಗಳಿಗೆ ಹೋಗಿ ತಪ್ಪಿಸಿಕೊಳ್ಳಬಹುದು. ನಮ್ಮ ಸಾಮರ್ಥ್ಯದಿಂದ ನಿನ್ನನ್ನೂ ಕಾಪಾಡುತ್ತೇವೆ" ಎಂದು ಹೇಳಿತು.

ಅದಕ್ಕೆ ಕಪ್ಪೆ, "ಏನೋ ಅಪ್ಪ! ನಾನಂತೂ ಕೇವಲ ಏಕ ಬುದ್ಧೀ ಕಪ್ಪೆ. ನನ್ನ ಬುದ್ಧಿ ನನ್ನನ್ನು ಇಲ್ಲಿಂದ ಓಡಿ ಹೋಗುವುದೇ ಒಳ್ಳೇದೆಂದು ಹೇಳುತ್ತದೆ. ನಾನು ನನ್ನ ಹೆಂಡತಿಯೊಂದಿಗೆ ಈ ದಿನವೇ ಇನ್ನೊಂದು ಕೊಳಕ್ಕೆ ಹೊರಟು ಹೋಗುತ್ತೇನೆ" ಎಂದಿತು.

ಅದು ತನ್ನ ಹೆಂಡತಿಯನ್ನು ಕರೆದುಕೊಂಡು ಅಲ್ಲಿಂದ ಹೊರಟು ಹೋಗುವುದನ್ನು ನೋಡಿ ಸಹಸ್ರಬುದ್ಧಿ ಶತಬುದ್ಧಿಗಳು ನಕ್ಕವು. ಮಾರನೇ ದಿನ ಬೆಳಗ್ಗೆ ಹಳ್ಳಿಯ ಜನರು ದೊಡ್ಡ ದೊಡ್ಡ ಬಲೆಗಳನ್ನು ತಂದು ಕೊಳಕ್ಕೆ ಹಾಕಿ, ತೂಬುಗಳನ್ನು ಮುಚ್ಚಿ, ಎಲ್ಲಾ ಮೀನುಗಳನ್ನೂ ಹಿಡಿದು ಬಿಟ್ಟರು. ಮೀನುಗಳೊಂದಿಗೆ ಆಮೆಗಳೂ, ಕಪ್ಪೆಗಳೂ, ಏಡಿಗಳೂ ಇತರ ಜಲಚರಗಳೂ ಅವರಿಗೆ ಸಿಕ್ಕಿದುವು. ಸಹಸ್ರಬುದ್ಧಿ ಶತಬುದ್ಧಿಗಳು ತಮ್ಮ ತಮ್ಮ ಹೆಂಡಂದಿರೊಂದಿಗೆ ತಪ್ಪಿಸಿಕೊಳ್ಳಲು ತಮ್ಮ ಜಾಣತನವನ್ನೆಲ್ಲಾ ಉಪಯೋಗಿಸಿದರೂ ಪ್ರಯೋಜನವಾಗಲಿಲ್ಲ.

ಹಳ್ಳಿಯವರು ತಮಗೆ ದೊರಕಿದವುಗಳನ್ನು ನೋಡಿ ತೃಪ್ತಿಪಟ್ಟು, ಮಧ್ಯಾಹ್ನದ ಮೇಲೆ ಮನೆಗೆ ಹೊರಟರು. ಸಹಸ್ರಬುದ್ಧಿ ಶತಬುದ್ಧಿ ಮೀನುಗಳು ಭಾರವಾಗಿದ್ದುದರಿಂದ ಶತಬುದ್ಧಿಯನ್ನು ಒಬ್ಬ ಹಳ್ಳಿಯವನು ತನ್ನ ಹೆಗಲಲ್ಲಿ ಹಾಕಿಕೊಂಡನು. ಸಹಸ್ರಬುದ್ಧಿಯನ್ನು ಒಂದು ಹಗ್ಗಕ್ಕೆ ಕಟ್ಟಿ ಗಳುವಿಗೆ ನೇತಾಡಿಸಿಕೊಂಡು ಇಬ್ಬರು ಹಳ್ಳಿಯವರು ಹೊತ್ತುಕೊಂಡು ಹೊರಟರು.

ಏಕಬುದ್ಧಿ ಕಪ್ಪೆ ತನ್ನ ಹೊಸ ಜಲಾಶಯದಲ್ಲಿದ್ದು, ಹಳ್ಳಿಯವರು ಹೊತ್ತುಕೊಂಡು ಹೋಗುವ ತಮ್ಮ ಸ್ನೇಹಿತ ಮೀನುಗಳನ್ನು ನೋಡಿ, ತನ್ನ ಹೆಂಡತಿಯೊಂದಿಗೆ, "ನೋಡಿದಿಯಾ ಪ್ರಿಯಳೇ, ಸಹಸ್ರಬುದ್ಧಿಯನ್ನೂ, ಶತಬುದ್ಧಿಯನ್ನೂ ಮನುಷ್ಯರು ಹೊತ್ತುಕೊಂಡು ಹೋಗುತ್ತಿದ್ದಾರೆ. ಕೇವಲ ಏಕ ಬುದ್ಧಿಯಾದ ನಾನು ಸಂತೋಷದಿಂದ ಜಲ ಕ್ರೀಡೆಯಾಡುತ್ತಿದ್ದೇನೆ!" ಎಂದಿತು.





# ಬಾದರಾಯಣಸಂಬಂಧ

**ಮಾ**ಯೆಯನ್ನೂ ಭೇದಿಸುವವನಾದ ರಾಜಾ ತ್ರಿವಿಕ್ರಮನು ಮಾಯವಾಗಿ ಹೋದ ಶವವು ನೇತಾಡಿಕೊಂಡಿರುವ ಮರದ ಬಳಿಗೆ ಮತ್ತೆ ಹೋಗಿ, ಅದನ್ನು ತೆಗೆದು ತನ್ನ ಹೆಗಲ ಮೇಲೇರಿಸಿಕೊಂಡು ಮೌನಮುದ್ರೆಯಿಂದ ಸ್ಮಶಾನದ ಕಡೆಗೆ ನಡೆಯ ತೊಡಗಿದನು. ಆಗ ಶವದೊಳಗೆ ಸೇರಿಕೊಂಡಿದ್ದ ಬೇತಾಳವು ಮಾತಾಡಲು ತೊಡಗಿ, " ಎಲೈ ರಾಜನೇ, ಮನುಷ್ಯರು ಒಂದೇ ರೀತಿಯಾಗಿರುವುದಿಲ್ಲ. ಬದಲಾವಣೆ ಹೊಂದುತ್ತಾರೆ. ಅದರೊಂದಿಗೆ ಅವರ ಅದೃಷ್ಟವೂ ಬದಲಾಗುತ್ತದೆ. ನೀನೂ ಅಂತಹ ಬದಲಾವಣೆಗೆ ಗುರಿಯಾಗಲಾರೆಯೆಂದು ಹೇಗೆ ಹೇಳುವುದು ? ಮಾನವನ ಬದಲಾವಣೆಗೆ ಕಾರಣವನ್ನು ಕೂಡಾ ಊಹಿಸಲು ಸಾಧ್ಯವಾಗುವುದಿಲ್ಲವೆಂದೇ ಕಾಣುತ್ತದೆ. ಸೋಮನಾಥನೆಂಬ ಯುವಕನ ಕಥೆ ಇದಕ್ಕೆ ನಿದರ್ಶನವಾಗಿದೆ. ಹೇಳುತ್ತೇನೆ. ಕೇಳು " ಎಂದು ಕಥೆಯನ್ನು ಪ್ರಾರಂಭಿಸಿತು :

ಸೋಮನಾಥನೆಂಬ ಆ ಹುಡುಗನು ತಂದೆ ತಾಯಿಗಳಿಗೆ ಒಬ್ಬನೇ ಮಗ. ಚಿಕ್ಕಂದಿನಿಂದಲೂ ಕೊಂಡಾಟಮಾಡಿ ಬೆಳೆಯಿಸಿದುದರಿಂದಲೋ ಏನೋ,

## ಬೇತಾಳಕಥೆಗಳು?..

ದಿಂದ ಬೇಗ, ತಂದೆಯ ಇದಿರಿಗೆ ಬರಬಾರದೆಂದು ಕೊಂಡು, ಎತ್ತಲೋ ನಡೆದನು.

ಎಲ್ಲಿಗೆ ಹೋಗುವುದೆಂಬ ಗೊತ್ತು, ಗುರಿ ಇಲ್ಲ ವಾದುದರಿಂದ ಆ ದಿನವಿಡೀ ನಡೆದೇ ನಡೆದನು. ಕಾಲುಗಳು ಸೋತು ಬಾತುವು. ಹೊಟ್ಟೆಯ ಕರುಳು ಗಳು ಹಸಿವೆಯಿಂದ ಹೊರಳಾಡುತಿದ್ದುವು. ಸಿಕ್ಕಿದ ಸ್ಥಳದಲ್ಲಿ ನೀರು ಕುಡಿಯುತ್ತಾ ಹಸಿವಿನ ಕಾಟವನ್ನು ಶಮನಮಾಡಲು ಪ್ರಯತ್ನಿಸಿದನು.

ನಡೆಯುತ್ತಾ ಒಂದು ಅರಣ್ಯವನ್ನು ಪ್ರವೇಶಿ ಸಿದನು. ಅರಣ್ಯದಾರಿಯಲ್ಲಿ ನಡೆಯುವಾಗ ಹೊತ್ತು ಮುಳುಗಿ ಕತ್ತಲೆಯೂ ಆಯಿತು. ಒಂದು ಕಡೆಯಲ್ಲಿ ಪಾಳು ಬಿದ್ದ ಅಮ್ಮನವರ ಗುಡಿಯೊಂದು ಕಣ್ಣಿಗೆ ಬಿದ್ದಿತು. ಆ ಗುಡಿಯ ಬಾಗಿಲಲ್ಲೇ ಕುಕ್ಕರಿಸಿದನು. ಹಸಿವೆಯಿಂದ ಕಣ್ಣು ಕತ್ತಲೆಯಾಗುತ್ತಿರಲು, ತಾನು ಮನೆ ಬಿಟ್ಟು ಬಂದುದು ಬಹಳ ಹೆಡ್ಡುತನವಾಯಿ ತೆಂದು ಅವನಿಗೆ ತೋರಿತು. ತನ್ನ ಶರೀರ ಭದ್ರತೆ ತನ್ನ ತಂದೆಯ ಮೇಲೆಯೂ ತನ್ನ ಮನೆಯ ಮೇಲೆಯೂ ಎಷ್ಟರ ಮಟ್ಟಿಗೆ ಆಧಾರಪಟ್ಟಿದೆ ಯೆಂಬುದು ಈಗ ತಿಳಿಯಿತು ಅವನಿಗೆ.

ಇಷ್ಟರಲ್ಲಿ ಅವನು ಕುಳಿತ ಕಡೆಗೆ ಒಂದು, ಜೋಡೆತ್ತಿನ ಗಾಡಿ ಬಂದು ನಿಂತಿತು. ಆ ಗಾಡಿ ಯನ್ನು ನಡೆಯಿಸಿಕೊಂಡು ಬಂದ ವೃದ್ಧನೊಬ್ಬನು, ಮೆಲ್ಲನೆ ತಳ್ಳಾಡುತ್ತ ಗಾಡಿಯಿಂದಿಳಿದು, ಆಯಾಸ ಪಡುತ್ತ ಆ ಗುಡಿಯ ಬಳಿಗೆ ಬಂದು ಸೋಮನಾಥನ ಪಕ್ಕದಲ್ಲೇ "ಅಪ್ಪಾ!" ಎಂದು ಕುಳಿತು, "ಯಾರಪ್ಪಾ ಹುಡುಗಾ, ನನಗೆ ಶ್ವಾಸ ಬಿಡುವುದೇ ಕಷ್ಟವಾಗಿದೆ. ಸ್ವಲ್ಪ ಎತ್ತುಗಳನ್ನು ಬಿಚ್ಚಿ, ಗಾಡಿಯಲ್ಲಿರುವ ಹುಲ್ಲನ್ನು ಅವುಗಳ ಮುಂದೆ ಹಾಕಪ್ಪ" ಎಂದನು.

ಸೋಮನಾಥನು ಎತ್ತುಗಳನ್ನು ಗಾಡಿಯಿಂದ ಕಳಚಿ ಮರಗಳಿಗೆ ಕಟ್ಟಿ, ಹುಲ್ಲು ಹಾಕಿ ಬಂದನು. ಆ ಮೇಲೆ ಇಬ್ಬರೂ ಮಾತಾಡ ತೊಡಗಿದರು.



ಅವನು ಯಾವ ವಿಷಯದಲ್ಲಿಯೂ ಅವರ ಮಗ ನಾಗಿ ಉಪಯೋಗಕ್ಕೆ ಬಾರದೆಯೇ ಬೆಳೆದನು. ಅವನಿಂದ ತನಗೆ ಯಾವ ಪ್ರಯೋಜನವೂ ಇಲ್ಲ ವೆಂದು ತಂದೆಗೆ ತೋರಿತು. ಅವನು ಎಲ್ಲೆಲ್ಲೋ ತಿರುಗಿ ಊಟ ತಿಂಡಿಗಳಿಗೆ ಮಾತ್ರ ಮನೆಗೆ ಬರು ತ್ತಿದ್ದನು. ತಾಯಿ ಅವನಿಗೆ ಎಷ್ಟೋ ವಿಧವಾಗಿ ಬುದ್ಧಿ ಹೇಳಿ ನೋಡಿದಳು. ಅದು ಒಂದಿಷ್ಟೂ ಅವನ ತಲೆಗೆ ಹಿಡಿಯಲಿಲ್ಲ. ಒಂದು ದಿನ ತಂದೆ ಅವನಿಗೆ ಕೋಪದಿಂದ ನಾನಾ ಬಗೆಯ ಹೀನ ಮಾತು ಗಳನ್ನು ಹೇಳಿ ಬಯ್ದನು. ಆ ಬಯ್ಗುಳ ಮಾತಿನ ಮೊನೆಗಳು ಮಾತ್ರ ಅವನ ಮನಸ್ಸಿಗೆ ಚೆನ್ನಾಗಿ ಚುಚ್ಚಿ ನೋಯಿಸಿದುವು. ಅಷ್ಟಾದರೂ ತಾನು ಮಾಡಿದ ತಪ್ಪು ಏನೆಂಬುದು ಮಾತ್ರ ಅವನಿಗೆ ಗೊತ್ತಾಗಲಿಲ್ಲ. ಆದುದರಿಂದ ತಂದೆಯೇ ತನ್ನ ಮೇಲೆ ಅನ್ಯಾಯವಾಗಿ, ಅಕ್ರಮವಾಗಿ, ಅಮಾನುಷ ವಾಗಿ ವರ್ತಿಸುವಂತೆ ಅವನಿಗೆ ತೋರಿತು. ಅಭಿಮಾನ

ಆ ವೃದ್ಧನ ಹೆಸರು ರಂಗನಾಥನೆಂದು. ಆತನು ಬಹಳ ಕಷ್ಟದಿಂದ ತನ್ನ ಸಮಾಚಾರವನ್ನು ಸೋಮನಾಥ ನೊಂದಿಗೆ ಹೇಳುತ್ತ "ಅಪ್ಪಾ, ನಿನ್ನನ್ನು ನೋಡುತ್ತಾ ಇದ್ದರೆ ನನ್ನ ಮಗನೇ ನೆನಪಿಗೆ ಬರುತ್ತಾನೆ. ನಿನ್ನಷ್ಟೇ ವಯಸ್ಸು ಅವನಿಗೂ. ಚಿಕ್ಕತನದಲ್ಲಿಯೇ ಅವನ ತಾಯಿ ತೀರಿ ಹೋಗಿಬಿಟ್ಟಳು. ನಾನೇ ಅವನಿಗೆ ತಂದೆಯೂ ತಾಯಿಯೂ ಆಗಿ ಸಾಕಿ ಬೆಳೆಸಿದೆ. ಆದರೆ ಅವನು ಬುದ್ಧಿ ಕಲಿಯದೆ ದುಷ್ಟರ ಸಹವಾಸಮಾಡಿ ನನಗೆ ತುಂಬಾ ಸಂಕಟ ಕೊಟ್ಟ. ಅವನು ಪೂರ್ತಿ ದುಷ್ಟ ನಾಗಿ ಬೇಡದ ದುರಭ್ಯಾಸಗಳನ್ನೆಲ್ಲಾ ಕಲಿತು, ಯಾವುದೋ ಘೋರವಾದ ಅಪರಾಧದಿಂದ, ರಾಜ ಭಟರಿಗೆ ಹೆದರಿ ಎತ್ತಲೋ ಓಡಿಹೋಗಿಬಿಟ್ಟ. ಅದು ಮೊದಲು ಅವನ ಜಾಡೇ ತಿಳಿಯಲಿಲ್ಲ. ಈಗ ಅಪರಾಧಿ ಅವನಲ್ಲವೆಂದೂ ಗೊತ್ತಾಗಿದೆ." ಎಂದನು.

"ನೀವು ಸಮಾಧಾನ ಪಟ್ಟುಕೊಳ್ಳಿ. ನಡೆದು ಹೋದುದಕ್ಕೆ ಚಿಂತಿಸಬೇಡಿ. ಎಂದಿಗಾದರೂ ನಿಮ್ಮ ಮಗ ಒಳ್ಳೇ ಬುದ್ಧಿ ತಂದುಕೊಂಡು ತಿರುಗಿ ಬರುತ್ತಾನೆ, ಬಿಡಿ" ಎಂದು ಸೋಮನಾಥನು ಹೇಳಿದನು. ಮನೆ ಬಿಟ್ಟು ತನ್ನ ಬುದ್ಧಿ ಹೇಗೆ ಬದಲಾಗಿದೆಯೋ ಹಾಗೆಯೇ ಅವನಿಗೂ ಬದಲಾದೀತು ಎಂದು ಸ್ವಾನುಭವದಿಂದ ಈಗ ಸೋಮನಾಥನು ಅರಿತಿದ್ದನು.

"ಎಂತಹ ಒಳ್ಳೆಯ ಮಾತು ಹೇಳಿದಿಯಪ್ಪಾ! ನಿನ್ನನ್ನು ಹಡೆದ ತಾಯಿ ತಂದೆಯರು ಪುಣ್ಯಾತ್ಮರು!" ಎಂದು ಹೇಳುವಷ್ಟರಲ್ಲೇ ರಂಗನಾಥನಿಗೆ ವಿಪರೀತ ವಾಗಿ ಕೆಮ್ಮಿನ ತೆರೆ ಶುರುವಾಯಿತು.

ಅವನು ಅತೀ ಪ್ರಯತ್ನದಿಂದ ಮಾತಾಡುತ್ತ, "ಹೂಂ, ಇನ್ನು ನಾನು ಬದುಕಲಾರೆ. ಈ ಕಾಡಿನಲ್ಲೇ ನನ್ನ ಸಾವು ಬರೆದಿದೇ ಅಂತ ಕಾಣುತ್ತೆ. ಅಪ್ಪಾ, ಹುಡುಗಾ! ನನಗೆ ಆಸ್ತೀ ಪಾಸ್ತೀ ಏನೂ ಇಲ್ಲ. ಇರುವುದೆಲ್ಲಾ ಈ ಗಾಡಿಯೂ, ಎತ್ತುಗಳ ಜೋಡಿಯೂ, ಮುರುಕು ಮನೆಯೂ ಮಾತ್ರವೇ. ಗಾಡಿಯನ್ನೂ ಎತ್ತುಗಳನ್ನೂ ಮಾರಿ ನನ್ನ ಕರ್ಮಕಾಂಡ ಮುಗಿಸಪ್ಪಾ. ಶ್ರೀನಿವಾಸಪುರದಲ್ಲಿ ನನ್ನ ಮಿತ್ರ ಗಂಗಾಧರನಿದ್ದಾನೆ. ಅವನಿಗೆ ನನ್ನ ಸಮಾಚಾರ ಹೇಳಿ, ಆತನ ಸಹಾಯ





ಬಂದು "ಏನೋ ಇದು? ಮರದಲ್ಲಿ ಹಣ್ಣು ಕಂಡ ಕೂಡಲೇ ಹೇಳದೆ ಕೇಳದೆ ಕೊಯ್ದು ತಿಂದು ಬಿಡುವುದೇನು? ಇದು ನಿನ್ನ ತಾತನ ಮರ ಅಂದು ಕೊಂಡೆಯಾ?" ಎಂದು ಕೇಳಿದನು.

"ಅಯ್ಯಾ, ನಾನು ಎರಡು ದಿನಗಳಿಂದ ಏನೂ ತಿನ್ನಲಿಲ್ಲ. ತಾಳಲಾಗದ ಹಸಿವೆಯಿಂದ ಕಂಡ ಕೂಡಲೇ ನಾಲ್ಕು ಹಣ್ಣು ಕೊಯ್ದು ಬಿಟ್ಟೆ" ಎಂದನು ಸೋಮನಾಥ.

ಗಂಗಾಧರನು ಅವನ ಬಳಿಯಲ್ಲೇ ಕುಳಿತು, "ಎತ್ತ ಹೊರಟಿರುವೆ? ಯಾರು ನೀನು?" ಎಂದು ಕೇಳಿದನು.

"ನಾನು ಅಕಸ್ಮಾತ್ತಾಗಿ ಈ ಊರಿಗೆ ಬಂದೆನು. ಶ್ರೀನಿವಾಸಪುರದಲ್ಲಿ ಗಂಗಾಧರ ಎಂಬವರ. ಮನೆಗೆ ಹೋಗಬೇಕಿತ್ತು. ಕಳೆದ ರಾತ್ರಿ ರಂಗನಾಥರು ಕಾಡಿನಲ್ಲಿ ಥಕ್ಕನೆ ತೀರಿ ಹೋದರು. ಶ್ರೀನಿವಾಸಪುರದಲ್ಲಿ ಗಂಗಾಧರ ಎಂಬವರು ಅವರ ಮಿತ್ರರಂತೆ. ಅವರ ಸಹಾಯದಿಂದ ಈ ಗಾಡಿಯನ್ನೂ ಎತ್ತುಗಳನ್ನೂ ಮಾರಿ ತನಗೆ ಉತ್ತರಕ್ರಿಯೆ ಮಾಡಿಸಲು ಹೇಳಿದರು. ನಾನು ಅವರನ್ನು ನೋಡಿದ ಸ್ವಲ್ಪ ಹೊತ್ತಿನಲ್ಲಿಯೇ ಅವರು ಪ್ರಾಣಬಿಟ್ಟರು." ಎಂದನು ಸೋಮನಾಥ.

"ಅಯ್ಯೋ ಪಾಪವೇ! ರಂಗನಾಥರು ತೀರಿ ಹೋದರೇ? ಅವರ ಮಗನೋ ನೀನು? ಓಡಿ ಹೋದ ಮೇಲೆ ನಿನ್ನನ್ನೇ ನೆನೆದುಕೊಂಡಿದ್ದರು. ಅದರಿಂದಲೇ ಅವರ ಆರೋಗ್ಯ ಹಾಳಾಯಿತು. ವಾರಕ್ಕೊಮ್ಮೆ ಗಾಡಿಯಲ್ಲಿ ಕಾಡಿನಾಚೆಯ ವೈದ್ಯರಲ್ಲಿಗೆ ಹೋಗಿ ಬರುತ್ತಿದ್ದರು. ಥಕ್ಕನೆ ನಿನ್ನನ್ನು ನೋಡಿದ ಸಂತೋಷದಲ್ಲಿ ಪ್ರಾಣಬಿಟ್ಟರೇನೋ?" ಎಂದು ಗಂಗಾಧರನು ಕಣ್ಣೀರನ್ನು ಒರೆಸಿಕೊಂಡನು. ಸೋಮನಾಥನಿಗೆ ಕೂಡಾ ಕಣ್ಣೀರು ತುಂಬಿತು.

ಗಂಗಾಧರನು ಅವನನ್ನು ತನ್ನ ಮನೆಗೆ ಕರೆದುಕೊಂಡು ಹೋಗಿ ತನ್ನ ಹೆಂಡತಿಗೆ ಅವನನ್ನು ರಂಗನಾಥರ ಮಗ, ಎಂದು ಪರಿಚಯ ಮಾಡಿಸಿ,

ಪಡೆ. ನನ್ನ ಕಾರ್ಯಗಳಿಗೆ ಆತ ನಿನಗೆ ಖಂಡಿತ ಸಹಾಯಮಾಡ್ತಾನೆ. ನನ್ನ ಶವವನ್ನು ನರಿ ನಾಯಿಗಳ ಪಾಲಿಗೆ ಬಿಡದೆ ಇಲ್ಲೇ ಹುಗಿದುಬಿಡಪ್ಪಾ. ನಿನಗೆ ಪುಣ್ಯ ಬರಲಿ!" ಎಂದು ಹೇಳಿ ಪ್ರಾಣಬಿಟ್ಟನು.

ಬೆಳಗಾದ ಕೂಡಲೇ ಸೋಮನಾಥನು ಸಮೀಪದಲ್ಲಿ ಒಂದುಕಡೆ ಹೊಂಡ ತೆಗೆದು ಅದರಲ್ಲಿ ವೃದ್ಧನ ಶವವನ್ನು ಹುಗಿದನು. ಆಮೇಲೆ ಗಾಡಿಯನ್ನು ಕಟ್ಟಿಕೊಂಡು ಹೊರಟು ಸಮೀಪದಲ್ಲಿದ್ದ ಒಂದು ಗ್ರಾಮವನ್ನು ಸೇರಿದನು. ಗ್ರಾಮದ ಹೊರಗೆ ಬಾವಿಯ ಹತ್ತಿರ ಎತ್ತುಗಳಿಗೆ ನೀರು ಕುಡಿಸಿ, ಪಕ್ಕದಲ್ಲಿರುವ ಹುಲ್ಲಿನ ಪ್ರದೇಶದಲ್ಲಿ ಮೇಯಲು ಬಿಟ್ಟನು. ಮತ್ತೊಂದು ಬದಿಯಲ್ಲಿ ಪೇರಳೆ ಮರದಲ್ಲಿ ಹಣ್ಣುಗಳು ಕಾಣಿಸಲು ಅವುಗಳನ್ನು ಕೊಯಿದು ತಿನ್ನುತ್ತಾ ಕುಳಿತನು.

ಆ ಸ್ಥಳದ ಯಜಮಾನನು ಗಂಗಾಧರನೇ. ಅವನು ದೂರದಿಂದ ಸೋಮನಾಥನನ್ನು ನೋಡಿ ಆ ಕಡೆಗೆ

"ಪಾಪ, ರಂಗನಾಥರು ಕಾಡಿನಲ್ಲಿ ಸತ್ತು ಹೋದರಂತೆ. ನನ್ನ ಸಹಾಯದಿಂದ ತನಗೆ ಕರ್ಮ ಮಾಡಿಸಲು ಹೇಳಿದ್ದಾರಂತೆ !" ಎಂದನು.

ಅವಳುಕೂಡಾ ಕಣ್ಣೀರು ತುಂಬಿಕೊಂಡು ಸೋಮನಾಥನನ್ನು ವಾತ್ಸಲ್ಯದಿಂದ ನೋಡಿದಳು.

ಅನಂತರ ರಂಗನಾಥನ ಉತ್ತರ ಕರ್ಮಗಳೆಲ್ಲ ಮುಗಿದುವು. ಗಂಗಾಧರನು ಸೋಮನಾಥನನ್ನು ಪ್ರೀತ್ಯಾದರಗಳಿಂದಲೇ ಗಮನಿಸಿದನು. "ಹುಡುಗನು ಓಡಿ ಹೋಗಿ ಐದಾರು ವರ್ಷಗಳಲ್ಲಿ ಬುದ್ಧಿ ತಂದು ಕೊಂಡಿದ್ದಾನೆ. ಚಿಕ್ಕಂದಿನಲ್ಲಿ ತುಂಬಾ ಪೋಕರಿತನ ಮಾಡಿದರೂ ಮನುಷ್ಯನು ಯಾವಾಗಲೂ ಹಾಗಿ ರುವುದಿಲ್ಲ. ಇವನೀಗ ತುಂಬ ಒಳ್ಳೆಯವನಾಗಿದ್ದಾನೆ. ರಂಗನಾಥರಿಗಿರುವ ಒಳ್ಳೆಯ ಗುಣಗಳೆಲ್ಲ ಈ ಹುಡುಗನಲ್ಲಿವೆ. ಮೊದಲನೇ ದಿನ ಹಸಿವೆಯಿಂದ ಪಾಪ, ನಾಲ್ಕು ಪೇರಳೆ ಹಣ್ಣು ಕೊಯ್ದು ತಿಂದುದಕ್ಕೆ ನನಗೆ ಹಾಗೆ ಕೋಪ ಬರಬಾರದಿತ್ತು" ಎಂದು ಕೊಂಡನು ಗಂಗಾಧರ. ಅವನಿಗೆ ಸೋಮನಾಥನು ತುಂಬಾ ಹಿಡಿಸಿದನು.

ಕರ್ಮಕಾಂಡವೆಲ್ಲಾ ಮುಗಿದ ಮೇಲೆ ತಾನು ಹೊರಟು ಹೋಗುವೆನೆಂದು ಸೋಮನಾಥನು ಎದ್ದನು. ಆದರೆ ಅದಕ್ಕಿಂತ ಮೊದಲೇ ತನ್ನ ಹೆಂಡತಿ ಯೊಂದಿಗೆ ಮಾತಾಡಿಕೊಂಡು ಒಂದು ನಿಶ್ಚಯಕ್ಕೆ ಬಂದಿದ್ದ ಗಂಗಾಧರನು, "ಎಲ್ಲಿಗೆ ಹೋಗುವೆಯಪ್ಪಾ? ರಂಗನಾಥರು ಅವರ ಸ್ವಂತ ಊರಿನಲ್ಲಿದ್ದುದನ್ನೆಲ್ಲ ಮಾರಿ ಈ ಊರಿಗೆ ಬಂದು, ಎಲ್ಲಾ ಕಳೆಕೊಂಡು ದಿವಾಳಿಯಾದರು. ನಿನಗೊಂದು ಮುರುಕುಮನೆ ಮಾತ್ರ ಇಟ್ಟಿದ್ದಾರೆ. ಅದರ ಚಿಂತೆ ಬಿಡು. ನನ್ನ ಮೇಲೆ ರಂಗನಾಥರಿಗೆ ತುಂಬ ಸ್ನೇಹ ವಿಶ್ವಾಸ ಪಾಪ. ಆದ್ದರಿಂದ ಈ ಪ್ರಪಂಚದಲ್ಲಿ ನಿನಗೆ ನಮ್ಮ ಕುಟುಂಬವೇ ಸನ್ನಿಹಿತವಾಗಿದೆ. ನನ್ನ ಮಗಳನ್ನೇ ನಿನಗೆ ಕೊಟ್ಟು ಮದುವೆ ಮಾಡುತ್ತೇನೆ. ಇಲ್ಲಿಯೇ



ಇದ್ದುಬಿಡು. ನಿನ್ನನ್ನು ನೋಡಿದರೆ ನಿನ್ನ ತಂದೆ ಯನ್ನೇ ನೋಡಿದಂತೆ ಆಗುತ್ತದೆ ನಮಗೆ!" ಎಂದನು.

ಸೋಮನಾಥನು ಅದಕ್ಕೆ ಒಪ್ಪಿ, ಗಂಗಾಧರನ ಮನೆಯಳಿಯನಾಗಿ, ಅವನಿಗಿರುವ ಸ್ವಲ್ಪ ಆಸ್ತಿಗೆ ವಾರಸುದಾರನೂ ಆಗಿ ಸುಖವಾಗಿ ಬದುಕಿದನು.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ ಸೋಮನಾಥನು ತನ್ನ ನಿಜವಾದ ತಂದೆಗೆ ಮಗನಾಗಿ ಉಪಯೋಗಕ್ಕೆ ಬಾರದವನಾಗಿ, ನಿಮಿಷ ಮಾತ್ರ ದೊಳಗೆ ರಂಗನಾಥನಿಗೆ ಮೆಚ್ಚಿನ ಮಗನಾಗಿ, ಮಗನು ಮಾಡಬೇಕಾದ ವಿಧಿಗಳನ್ನೆಲ್ಲಾ ರಂಗನಾಥನಿಗೆ ಮಾಡಿದುದು ಮಾತ್ರವಲ್ಲದೆ, ಗಂಗಾಧರನಿಗೂ ರಂಗ ನಾಥನಿಗೂ ಇದ್ದ ಮೈತ್ರಿಯನ್ನು ಕೂಡಾ ತಾನು ಸಫಲಪಡಿಸಿಕೊಂಡನಲ್ಲಾ ? ಅದು ಹೇಗೆ ಸಾಧ್ಯ ವಾಯಿತು ? ಸೋಮನಾಥನಲ್ಲಿ ಉಂಟಾದ ಬದಲಾ ವಣೆ ನಿಜವಾದುದೇನಾ ? ತಾನು ರಂಗನಾಥನ ಮಗನು ಅಲ್ಲವೆಂದು ಗಂಗಾಧರನೊಂದಿಗೆ ಹೇಳ

ದಿದ್ದುದು ಅವನ ದುರ್ಬುದ್ಧಿ ಅಲ್ಲವೇನು? ಈ ಸಂದೇಹಗಳಿಗೆ ತಕ್ಕ ಸಮಾಧಾನ ಗೊತ್ತಿದ್ದೂ ಹೇಳದೆ ಹೋದರೆ ತಲೆಯೊಡೆದು ಸಾಯುವಿ!" ಎಂದಿತು.

ಅದಕ್ಕೆ ತ್ರಿವಿಕ್ರಮನು ಹೀಗೆಂದನು: "ತಂದೆ ಮಕ್ಕಳ ಸಂಬಂಧವು ಅನೇಕ ವರ್ಷಗಳಿಂದ ಕೆಟ್ಟು ಹೋದರೆ ಅದಕ್ಕೆ ಕಾರಣಗಳು ಒಂದರ ಮೇಲೊಂದಾಗಿ ಗುಡ್ಡದಷ್ಟಿರುತ್ತವೆ. ಅನೇಕ ವರ್ಷಗಳಿಂದ ಒಡೆದು ಹೋದ ಲೋಹದ ಬಾಗಿಲನ್ನು ಯಾವರೀತಿಯೂ ಮುಚ್ಚಲು ಸಾಧ್ಯವಾಗದು. ಸೋಮನಾಥನಿಗೂ ಅವನ ತಂದೆಗೂ ಸರಿಬೀಳದೆ ಹೋದರೆ, ತಪ್ಪು ಪೂರಾ ಸೋಮನಾಥನದೇ ಎನ್ನಲು ಸಾಧ್ಯವಿಲ್ಲ. ತಂದೆ ತನ್ನ ಮೇಲೆ ಅನ್ಯಾಯವಾಗಿ ಕೋಪವನ್ನೇ ತೋರಿಸುವನೆಂಬ ವಿಶ್ವಾಸವೇ ಅವನು ಮನೆಬಿಟ್ಟು ಹೋಗಲು ಕಾರಣವಾಯಿತೆಂದರೆ, ಅವನು ತನ್ನಲ್ಲಿ ತಪ್ಪೇನಿಲ್ಲವೆಂದು ದೃಢವಾಗಿ ನಂಬಿದ್ದಾನೆಂದಾಯಿತು. ಅವನೊಂದಿಗೆ ಹೋಲಿಸಿದರೆ ರಂಗನಾಥನ ಮಗನು ಕೂಡಾ ಮನೆಯಿಂದ ಓಡಿ ಹೋದವನಾದರೂ ತಾನು ಒಬ್ಬ ಘೋರ ಅಪರಾಧಿ ಎಂದು ತಿಳಿದು, ತಂದೆಯ ಮೇಲಿನ ಸಿಟ್ಟಿಗಿಂತಲೂ ರಕ್ಷಕಭಟರ ಭಯದಿಂದಲೇ ಓಡಿ ಹೋಗಿದ್ದಾನೆ. ತೀರಾ ಅಪರಿಚಿತನಾದ ರಂಗನಾಥನೊಂದಿಗೆ ಸೋಮನಾಥನು ಒಳ್ಳೆಯ ಸಂಬಂಧವನ್ನು ಇಟ್ಟುಕೊಳ್ಳಲು ಸಾಧ್ಯವಾಯಿತೆಂದರೆ ಅವನಲ್ಲಿ ಸ್ವತಃ ಕೆಡುಕಿನ ಲಕ್ಷಣಗಳಿಲ್ಲ ಎಂದೂ ಸ್ಪಷ್ಟವಾಗುತ್ತದೆ. ಅಷ್ಟೇ ಅಲ್ಲ, ಒಂದು ಬದಿಯಲ್ಲಿ ಹಸಿವಿನಿಂದ ದಹಿಸಿ ಹೋಗುವವನಾಗಿದ್ದರೂ ಸಾಯುವವನು ಹೇಳಿದ ಮಾತನ್ನು ನಡೆಯಿಸಿದನು. ಅವನು ಸ್ವತಃ ದುಷ್ಟನಾಗಿರುತ್ತಿದ್ದರೆ ಗಂಗಾಧರನೂ ಕಂಡು ಹಿಡಿಯುತ್ತಿದ್ದನು. ಕಣ್ಣು ಮುಚ್ಚಿ ತನ್ನ ಮಗಳನ್ನು ಅವನಿಗೆ ಕೊಡುತ್ತಿರಲಿಲ್ಲ. ಸೋಮನಾಥನು ತಾನು ರಂಗನಾಥನ ಮಗನಲ್ಲವೆಂದು ಗಂಗಾಧರನ ಹತ್ತಿರ ಹೇಳದಿರಲು ದುರುದ್ದೇಶವೇನೂ ಇರಲಿಲ್ಲ. ರಂಗನಾಥನ ಉತ್ತರ ಕ್ರಿಯೆಗಳು ಮುಗಿಯುವವರೆಗೂ ಸೋಮನಾಥನು ಸತ್ತುಹೋದವನ ಮಗನೇ ಎಂದು ಗಂಗಾಧರನು ನಂಬಿದರೆ ಬೇಡದ ಪ್ರಶ್ನೆಗಳಾವುದೂ ತಲೆಯೆತ್ತಲಾರದು. ಆಮೇಲೆ ತನ್ನ ದಾರಿ ಹಿಡಿದು ಹೋದರಾಯಿತೆಂದುಕೊಂಡನು. ಆದರೆ ಗಂಗಾಧರನಿಗೆ ಸತ್ತುಹೋದ ಮಿತ್ರನೇ ಅವನಲ್ಲಿ ಕಂಡುಬಂದನು. ಅವನ ಸಂತೋಷವನ್ನು ತಾನೇಕೆ ಕೆಡಿಸಬೇಕೆಂದು ಸೋಮನಾಥನು ನಿಜ ಹೇಳದೆಯೇ ಮುಚ್ಚಿಟ್ಟುಕೊಂಡನು.

ರಾಜನಿಗೆ ಈ ವಿಧವಾಗಿ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮರದ ಕೊಂಬೆಯಲ್ಲಿ ನೇತಾಡಿತು.



# ಮಂತ್ರಿ ಮಾಡಿದ ಪರೀಕ್ಷೆ

**ಶೂ**ರಸೇನನೆಂಬ ರಾಜನು ನೆರೆ ರಾಜ್ಯದ ಮೇಲೆ ದಾಳಿಮಾಡಿ ಅದನ್ನು ತನ್ನ ರಾಜ್ಯದಲ್ಲಿ ಸೇರಿಸಿಕೊಳ್ಳಬೇಕೆಂದು ಕೊಂಡನು. ಆ ಕುರಿತು ಮಹಾ ಮೇಧಾವಿಯಾದ ತನ್ನ ಮಂತ್ರಿಯೊಂದಿಗೆ ಆಲೋಚನೆ ಕೇಳಿದನು.

"ಮಹಾರಾಜರೇ, ನೆರೆ ದೇಶದ ರಾಜನು ನಿಜಕ್ಕೂ ಬುದ್ಧಿವಂತನಾದರೆ ನಾವು ಆ ರಾಜ್ಯದ ತಂಟೆಗೆ ಹೋಗದಿರುವುದೇ ಒಳ್ಳೇದು. ಅವನು ಬುದ್ಧಿವಂತನಲ್ಲದಿದ್ದರೆ ತಪ್ಪದೆ ಯುದ್ಧಮಾಡೋಣ" ಎಂದು ಹೇಳಿ ಮಂತ್ರಿ ನೆರೆ ದೇಶದ ರಾಜನ ಬಳಿಗೆ ಒಬ್ಬ ದೂತನನ್ನು ಕಳುಹಿಸಿದನು.

ಆ ದೂತನು ಆ ರಾಜನ ಬಳಿಗೆ ಹೋಗಿ, "ಮಹಾರಾಜರೆ, ನಮ್ಮ ಮಹಾರಾಜರು ಸತ್ತರೆ ಬದುಕುವವನನ್ನೂ, ಬದುಕಿದರೆ ಬದುಕುವವನನ್ನೂ ಕಳುಹಿಸಿಕೊಡಬೇಕೆಂದು ಕೇಳುತ್ತಾರೆ." ಎಂದು ವಿನಯದಿಂದ ಹೇಳಿದನು.

ಆ ರಾಜನು ತನ್ನ ಮಂತ್ರಿಯನ್ನು ನೋಡಿದನು. ಮಂತ್ರಿ ಶ್ರಾದ್ಧಮಾಡಿಸುವ ಒಬ್ಬ ಬ್ರಾಹ್ಮಣನನ್ನೂ, ಒಬ್ಬ ವೈದ್ಯನನ್ನೂ ಆ ದೂತನ ಜತೆಯಲ್ಲಿ ಕಳುಹಿಸಿಕೊಟ್ಟನು.

ಶೂರಸೇನನ ಮಂತ್ರಿ ಅವರಿಬ್ಬರನ್ನೂ ಸತ್ಕರಿಸಿ ದೊಡ್ಡ ಬಹುಮಾನಗಳನ್ನು ಕೊಟ್ಟು ಹಿಂದೆ ಕಳುಹಿಸಿ ಕೊಟ್ಟು, ರಾಜನನ್ನು ನೋಡಿ, "ನಾವು ಆ ರಾಜ್ಯಕ್ಕೆ ದಾಳಿ ತೆಗೆಯುವುದು ಒಳ್ಳೆಯದಲ್ಲ. ಅಲ್ಲಿಯ ಮಂತ್ರಿ ಬಹಳ ಬುದ್ಧಿವಂತ" ಎಂದನು.

"ಏನು ಅವನ ಬುದ್ಧಿವಂತಿಕೆ ?" ಎಂದು ಶೂರಸೇನನು ಕೇಳಿದನು.

"ಸತ್ತರೆ ಬದುಕುವವನನ್ನು ಕಳುಹಿಸಲು ಹೇಳಿದರೆ ಶ್ರಾದ್ಧಮಾಡಿಸುವ ಬ್ರಾಹ್ಮಣನನ್ನು ಕಳಿಸಿದ್ದಾನೆ ಮಂತ್ರಿ. ಯಾರಾದರೂ ಸತ್ತರೆ ಹೊರತು ಈ ಬ್ರಾಹ್ಮಣನಿಗೆ ಬದುಕುವ ಮಾರ್ಗವಿಲ್ಲ. ಹಾಗೆಯೇ ಬದುಕಿದರೆ ಬದುಕುವವನು ವೈದ್ಯ. ರೋಗಿಗಳನ್ನು ಬದುಕಿಸಲಾಗದ ವೈದ್ಯನು ಬದುಕಲು ಸಾಧ್ಯವಿಲ್ಲ" ಎಂದನು ಮಂತ್ರಿ.

ರಾಜನು ತನ್ನ ಮಂತ್ರಿಯ ಪರೀಕ್ಷೆಯನ್ನು ಮೆಚ್ಚಿದನು.



# ಮಗನ ಉಪಾಯ

ರಂಗಾಪುರದ ಜಮೀನ್ದಾರನು ತನಗೆ ಖ್ಯಾತಿ ಬರುವಂತಹ ಕಾರ್ಯವೇನಾದರೂ ಇದ್ದರೆ ಮಾತ್ರವೇ ಮಾಡುವವನು. ತನ್ನ ಹೆಸರು ಪ್ರಸಿದ್ಧವಾಗದ ಕಾರ್ಯಗಳಿಗೆ ತಲೆ ಹಾಕುವವನಲ್ಲ. ತಾನು ಜಮೀನ್ದಾರನಾಗಿದ್ದರೂ ಸಹ, ತನ್ನ ಗ್ರಾಮದ ಜನರ ಕಷ್ಟನಷ್ಟಗಳನ್ನು ಸ್ವಲ್ಪವೂ ಹಚ್ಚಿಕೊಳ್ಳುವವನಲ್ಲ.

ಬಹಳ ಕಾಲದಿಂದ ರಂಗಾಪುರಕ್ಕೆ ಒಳ್ಳೆಯ ನೀರಿನ ಬಾವಿ ಇರಲಿಲ್ಲ. ಗ್ರಾಮಸ್ಥರು ಕುಡಿಯುವ ನೀರಿಗಾಗಿ ಬಹಳ ದೂರ ಹೋಗಬೇಕಾಗಿತ್ತು.

ಒಂದು ವರ್ಷ ನೀರಿಗೆ ಬರಬಂದು ಜನರ ಸಮಸ್ಯೆ ತೀವ್ರವಾಯಿತು. ಆದರೂ ಜಮೀನ್ದಾರನು, ಬಾವಿ ತೋಡಿಸಬೇಕೆಂದು ಜನರು ಬೊಬ್ಬಿಟ್ಟರೂ ಅಲಕ್ಷ್ಯವಾಗಿದ್ದನು.

ಜಮೀನ್ದಾರನ ಮಗನು ತಂದೆಯ ಹಾಗಲ್ಲ. ಅವನು ಗ್ರಾಮಸ್ಥರಿಂದ ಚಂದಾ ವಸೂಲುಮಾಡಿ ಗ್ರಾಮಸ್ಥರಿಂದಲೇ ಬಾವಿಯನ್ನು ತೋಡಿಸಲು ತೊಡಗಿದನು. ಎಷ್ಟು ಆಳ ತೋಡಿದರೂ ನೀರು ಸಿಗದೆ, ಕಡೆಗೆ ಬಂಡೆಗಲ್ಲು ಅಡ್ಡ ತಗಲಿತು. ಅದನ್ನು ಒಡೆದು ಆಳಪಡಿಸುವ ಶಕ್ತಿ ಗ್ರಾಮಸ್ಥರಿಗಿರಲಿಲ್ಲ.

ಜಮೀನ್ದಾರನ ಮಗನು ಮಧ್ಯ ರಾತ್ರಿಯಲ್ಲಿ ಸ್ವಲ್ಪ ಕಲ್ಲೆಣ್ಣೆಯನ್ನು ಬಾವಿಯೊಳಗೆ ಹೊಯ್ಯಿಸಿದನು. ತನ್ನ ಗ್ರಾಮದಲ್ಲಿ ಕಲ್ಲೆಣ್ಣೆ ಒಸರುತ್ತದೆಂದು ಜಮೀನ್ದಾರನಿಗೆ ಸಂತೋಷವಾಯಿತು. ಆದರಿಂದ ತನಗೆ ಕೀರ್ತಿ ಬರುತ್ತದೆಂದುಕೊಂಡು, ಎಷ್ಟು ಹಣವಾದರೂ ಖರ್ಚುಮಾಡಿ ಬಂಡೆಯನ್ನು ಒಡೆಯಿಸಿ ಬಾವಿಯನ್ನು ಆಳಪಡಿಸಿದನು. ನೀರು ಒಸರು ಧಂಡಿಯಾಗಿ ಬಂದಿತು. ಬಾವಿ ತುಂಬಿ ಗ್ರಾಮಸ್ಥರ ನೀರಿನ ಸಮಸ್ಯೆ ತೀರಿತು. ಆಮೇಲೆ ಗುಟ್ಟುಗೊತ್ತಾದರೂ ಜಮೀನ್ದಾರನು ಬಾಯಿಬಿಡಲಿಲ್ಲ.





# ಮಿಠಾಯಿ ಪಿಶಾಚಿಗಳು

**ಒಂ**ದು ಊರಿನಲ್ಲಿ ಅಡಿಗೆ ಮಾಡಿ ಬದುಕುವ ಒಬ್ಬಳು ಹೆಂಗುಸಿದ್ದಳು. ಯಾರ ಮನೆಯಲ್ಲಿ ಏನು ವಿಶೇಷವಾದರೂ ಅವಳು ಅಡಿಗೆ ಮಾಡುವಳು. ಅವಳಿಗೆ ಬಾಬಣ್ಣನೆಂಬ ಒಬ್ಬ ಮಗನಿದ್ದ. ಅವಳ ಗಂಡ ತೀರಿ ಹೋದುದರಿಂದ, ಮಗನನ್ನು ಬೆಳೆಸುವ ಬಾಧ್ಯತೆ ಕೂಡಾ ಅವಳೇ ನೋಡಿಕೊಳ್ಳಬೇಕಾಗಿತ್ತು. ಬಾಬಣ್ಣನು ತಾಯಿಗೆ ಅಡಿಗೆಯಲ್ಲಿ ಸಹಾಯಕನಾಗಿರುತ್ತ ತಾನೂ ಅಡಿಗೆಯಲ್ಲಿಯೂ, ಭಕ್ಷ್ಯ ಮಾಡುವುದರಲ್ಲಿಯೂ ಗಟ್ಟಿಗನಾದನು. ತಾಯಿ ತೀರಿ ಹೋದ ಮೇಲೆ ಬಾಬಣ್ಣನು ಇರುವ ಹಣವನ್ನೆಲ್ಲಾ ತೆಗೆದುಕೊಂಡು, ಒಳ್ಳೆಯ ವ್ಯಾಪಾರ ನಡೆಯುವುದೆಂಬ ಬೇರೊಂದು ಊರಿಗೆ ಹೋಗಿ, ಅಲ್ಲಿ ಒಂದು ಮಿಠಾಯಿ ಅಂಗಡಿಯನ್ನು ತೆರೆದನು.

ಮೊದಲನೇ ದಿನ ವ್ಯಾಪಾರವು ಚೆನ್ನಾಗಿಯೇ ಸಾಗಿತು. ಹೊತ್ತು ಮಾಲಿ ಸಾಯಂಕಾಲವಾಗುವಾಗ, ಇನ್ನೊಂದು ಮತಾಯಿ ಅಂಗಡಿಯವನು, ತನ್ನ ಅಂಗಡಿಯನ್ನು ಆಗಲೇ ಮುಚ್ಚಿ, ಬಾಬಣ್ಣನ ಬಳಿಗೆ ಬಂದು ಆಶ್ಚರ್ಯದಿಂದ, "ಇನ್ನೂ ಅಂಗಡಿ ಮುಚ್ಚಲಿಲ್ಲವೇನು ?" ಎಂದು ಕೇಳಿದ.

"ಆಗಲೇ ಮುಚ್ಚಬೇಕೇಕೆ?" ಎಂದು ಬಾಬಣ್ಣನೂ ಆಶ್ಚರ್ಯದಿಂದ ಮರುಪ್ರಶ್ನೆ ಮಾಡಿದ.

"ಓಹೋ! ಈ ದಿನವೇ ಹೊಸ ಅಂಗಡಿ ಇಟ್ಟವನಲ್ಲವೇ ? ಸರಿ, ನಮ್ಮ ಅನುಭವ ನಿನಗೂ ಆಗಲಿ" ಎಂದು ಹೇಳಿಕೊಂಡು ಆ ಮನುಷ್ಯನು ಹೊರಟು ಹೋದನು.

ಬಾಬಣ್ಣನಿಗೆ ಏನು ಸಂಗತಿಯೋ ಅರ್ಥವಾಗಲಿಲ್ಲ. ಅಷ್ಟರಲ್ಲಿ ಇನ್ನೊಬ್ಬ ಮಿಠಾಯಿ ಅಂಗಡಿಯವನು ಆ ದಾರಿಯಾಗಿ ಹೋಗುತ್ತ, ತೆರೆದಿದ್ದ ಬಾಬಣ್ಣನ ಅಂಗಡಿಯನ್ನು ನೋಡಿ, "ಇನ್ನೂ ಅಂಗಡಿ ಮುಚ್ಚಲಿಲ್ಲವೇ? ದೀಪ ಹಚ್ಚುವ ವೇಳೆಯಾಯಿತಲ್ಲಾ?" ಎಂದು ಆಶ್ಚರ್ಯದಿಂದ ಕೇಳಿದನು.

"ಅದನ್ನೇ ಯೋಚಿಸುತ್ತಿದ್ದೇನೆ. ಮೊದಲು ಒಬ್ಬನು ಹೀಗೇ ಕೇಳಿದ. ನಾನು ಹೊಸಬ. ನೀವೆಲ್ಲಾ ಗಾಬರಿಯಾದವರ ಹಾಗೆ ಏಕೆ ಅಂಗಡಿ ಮುಚ್ಚುವಿರೋ ಗೊತ್ತಾಗಲಿಲ್ಲ. ಉಳಿದ ಅಂಗಡಿಗಳೆಲ್ಲಾ ಇನ್ನೂ ತೆರೆದೇ ಇವೆಯಲ್ಲಾ ? ಮಿಠಾಯಿ ಅಂಗಡಿಗೇನು ಬಂತು ? ದಯಮಾಡಿ ಸ್ವಲ್ಪ ಹೇಳುವಿರಾ ?" ಎಂದನು ಬಾಬಣ್ಣ.

ಎಂ. ಕೆ. ಈಶ್ವರರಾವ್



ಆ ಮನುಷ್ಯನು ಬಾಬಣ್ಣನ ಹತ್ತಿರ ಬಂದು ಸಣ್ಣದನಿಯಲ್ಲಿ ಹೀಗೆಂದನು : "ಕತ್ತಲೆ ಬಿದ್ದ ಮೇಲೆ ಊರೊಳಗೆ ಎರಡು ಪಿಶಾಚಿಗಳು ಬರುತ್ತವೆ. ಅವು ಯಾವ ರೂಪದಲ್ಲಿ ಬಂದರೂ ಬರಬಹುದು. ಅವುಗಳಿಗೆ ಮಿಠಾಯಿಗಳೆಂದರೆ ಬಹಳ ಇಷ್ಟ. ಅವುಗಳ ಕಣ್ಣಿಗೆ ಮಿಠಾಯಿಗಳು ಬಿದ್ದರೆ ಸಾಕು, ತಟ್ಟೆಗಳೊಂದಿಗೇ ಎತ್ತಿಕೊಂಡು ಹೋಗಿಬಿಡುತ್ತವೆ. ಆದರೆ ಮುಚ್ಚಿದ ಅಂಗಡಿಗಳ ತಂಟೆಗೆ ಮಾತ್ರ ಅವು ಬರುವುದಿಲ್ಲ."

ಈ ಸಮಾಚಾರವನ್ನು ಹೇಳಿದವನು ಬೇಗನೇ ಅಂಗಡಿಯನ್ನು ಮುಚ್ಚುವಂತೆ ಮತ್ತೊಮ್ಮೆ ಎಚ್ಚರಿಕೆ ಹೇಳಿ, ತನ್ನ ದಾರಿ ಹಿಡಿದು ಹೊರಟು ಹೋದನು.

ಬಾಬಣ್ಣನಿಗೆ ದೆವ್ವ ಪಿಶಾಚಿಗಳೆಂದರೆ ಭಯ ವೇನಿರಲಿಲ್ಲ. ತನ್ನ ಊರಿನಲ್ಲಿ ಅವನು ಕೊಳ್ಳೀ ದೆವ್ವಗಳನ್ನು ನೋಡಿದ್ದನು. ಅವುಗಳು ಅವುಗಳ ಪಾಡಿಗೆ ಕುಣಿದಾಡಿಕೊಂಡಿರುತ್ತವೆಯೇ ಹೊರತು ಯಾರ ತಂಟೆಗೂ ಹೋಗುತ್ತಿರಲಿಲ್ಲ. ದೆವ್ವಗಳಿಗಿಂತ ದಾರುಣವಾಗಿ ಒದ್ದೆ ಬಟ್ಟೆಯಿಂದ ಕುತ್ತಿಗೆ ಕೊಯ್ಯುವ ಮನುಷ್ಯರು ಎಷ್ಟೋಮಂದಿ ಇದ್ದಾರೆ. ಆದುದರಿಂದ ಈ ಪಿಶಾಚಿಗಳ ರೀತಿ ಎಂಥದೆಂದು ನೋಡಲೇ ಬೇಕೆಂದುಕೊಂಡು ಅಂಗಡಿ ಮುಚ್ಚದೆ ಹಾಗೆಯೇ ಕುಳಿತುಕೊಂಡನು.

ಸ್ವಲ್ಪ ಹೊತ್ತಿಗೆ ಇಬ್ಬರು ಸ್ತ್ರೀಯರು ಸಾಧಾರಣ ಸ್ತ್ರೀಯರಿಗಿಂತ ಹೆಚ್ಚಿನ ಅಟ್ಟಹಾಸದೊಂದಿಗೆ ಮಾತಾಡುತ್ತ ನಗುತ್ತ ಅವನ ಅಂಗಡಿಯೊಳಗೆ ಪ್ರವೇಶಿಸಿದರು. ಅವರಿಬ್ಬರೂ ತಾಯಿಯೂ ಮಗಳೂ ಆಗಿ ಕಂಡುಬಂದರು.

"ಏನೋ ತಿಂಡೀ ಅಂಗಡಿ ಮಾರಾಯಾ! ನಾಳೆ ನನ್ನ ಮಗಳಿಗೆ ಮದುವೆ. ಅದಕ್ಕಾಗಿ ಹದಿನೈದು ಬುಟ್ಟಿ ಬೇರೆ ಬೇರೆ ಬಗೆಯ ಮಿಠಾಯಿಗಳನ್ನು ತಯಾರಿಸಿ ಕೊಡುವೆಯಾ?" ಎಂದು ತಾಯಿ ಬಾಬಣ್ಣನನ್ನು ಕೇಳಿದನು.

ಅವಳ ಮಾತುಗಳ ರೀತಿ ವಿಚಿತ್ರವಾಗಿರುವಂತೆ ಬಾಬಣ್ಣನಿಗೆ ತೋರಿತು. ಆ ಸ್ತ್ರೀಯರನ್ನು ಮುಡಿ ಯಿಂದ ಅಡಿಯವರೆಗೆ ಪರೀಕ್ಷಿಸಿ ನೋಡಿದನು. ಅವುಗಳ ಪಾದಗಳು ಹಿಂದಕ್ಕೆ ತಿರುಗಿದ್ದುವು. ಏನೂ ಸಂದೇಹವಿಲ್ಲ. ಎಲ್ಲರೂ ಹೆದರುವ ಮಿಠಾಯಿ ತಿನ್ನುವ ಪಿಶಾಚಿಗಳು ಇವೇ!

ಬಾಬಣ್ಣ ಬಾಯಿ ತುಂಬ ನೆಗಾಡುತ್ತ, "ಅದಕ್ಕೇನು ಕಷ್ಟ! ನಿಮಗೆ ಇಷ್ಟವಾದ ಮಿಠಾಯಿಗಳನ್ನು ನಿಮಿಷ ಮಾತ್ರದಲ್ಲಿ ತಯಾರಿಸಿಡಬಹುದು. ನಿಮಗೆ ಯಾವ ಯಾವ ಮಿಠಾಯಿಗಳು ಬೇಕು?" ಎಂದು ಕೇಳಿದನು.

ಪಿಶಾಚಿಗಳೆರಡೂ ಅಲ್ಲಿರುವ ಮಿಠಾಯಿಗಳನ್ನೆಲ್ಲಾ ಸ್ವಲ್ಪ ಸ್ವಲ್ಪ ರುಚಿ ನೋಡಿ, "ಇವೆಲ್ಲಕ್ಕಿಂತ ತೆಂಗಿನ ಕಾಯಿ ಬರ್ಫಿ ಚೆನ್ನಾಗಿದೆ. ಹದಿನೈದು ಬುಟ್ಟಿ ತೆಂಗಿನಕಾಯಿ ಬರ್ಫೀ ತಯಾರು ಮಾಡಿಟ್ಟುಬಿಡು.

ಒಳ್ಳೆಯ ತೆಂಗಿನಕಾಯನ್ನೂ, ಸಕ್ಕರೆ ಯಾಲಕ್ಕೀ, ದ್ರಾಕ್ಷೀ ಎಲ್ಲಾ ತುಂಬಾ ಬೀಳಲಿ !" ಎಂದುವು.

"ಆಗಲಾಗಲಿ ! ಒಳ್ಳೆಯ ತೆಂಗಿನಕಾಯಿ ಸಕ್ಕರೆ ಮುಂತಾದ್ದು ಕೊಂಡುಕೊಳ್ಳಲಿಕ್ಕೆ ಮೊದಲು ಸ್ವಲ್ಪ ಹಣಬೇಕು." ಎಂದ ಬಾಬಣ್ಣ.

ತಾಯಿ ಪಿಶಾಚಿ ಸೊಂಟದೆಡೆಯಿಂದ ಹಣದ ಚೀಲವನ್ನು ತೆಗೆದು ಬಾಬಣ್ಣನ ಕೈಗೆ ಕೊಟ್ಟು, "ಇದರಲ್ಲಿ ಐದುನೂರು ರೂಪಾಯಿಗಳಿವೆ. ಉಳಿದ ಹಣ ಮಿಠಾಯಿ ತೆಗೆದುಕೊಳ್ಳುವಾಗ ಕೊಡುತ್ತೇವೆ" ಎಂದು ಹೇಳಿ ಮಗಳನ್ನು ಕರೆದುಕೊಂಡು ಬೇಗ ಬೇಗನೇ ಹೊರಟು ಹೋದಳು.

ಆಗ ಹುಡುಗಿ ಪಿಶಾಚಿ ತಾಯಿಯೊಂದಿಗೆ, "ಅವನಿಗೆ ಹಣ ಏತಕ್ಕೆ ಕೊಟ್ಟೆ ಅಮ್ಮಾ? ಹಣ ಕೊಟ್ಟು ತೀರಿದರೆ ನನಗೆ ಬೇರೆ ಮಿಠಾಯಿ ತಿನ್ನಲು ಹಣವಿಲ್ಲವಲ್ಲಾ !" ಎಂದಳು.

ತಾಯಿ ಪಿಶಾಚಿ ಗಲಗಲನೆ ನಕ್ಕು, "ನೀನೊಬ್ಬಳು ಹುಚ್ಚುಮೂತಿ ! ಇವನು ಊರಿಗೆ ಹೊಸಬ ಗೊತ್ತಾ? ಹಣದ ಆಸೆ ತೋರಿಸಿದರೆ ದಿನಾರಾತ್ರಿ ಬಾಗಿಲು ತೆರೆದಿಡುತ್ತಾನೆ. ನಾವು ಕೊಟ್ಟ ಹಣದಿಂದ ನಾಳೆ ಹದಿನೈದು ಬುಟ್ಟಿ ಬರ್ಫೀ ಮಾಡಿಡುತ್ತಾನೆ. ನಾವು ನಾಳೆ ಬಂದು ದೂರದಿಂದಲೇ ನಾಲಿಗೆಚಾಚಿ ಎಲ್ಲವನ್ನೂ ತಿಂದುಬಿಡೋಣ. ಅದನ್ನು ನೋಡಿ ಅವನು ಹೆದರಿ ಓಡಿ ಹೋಗುತ್ತಾನೆ. ಆಮೇಲೆ ನಾವು ಅಂಗಡಿಯಲ್ಲಿದ್ದ ಎಲ್ಲಾ ಮಿಠಾಯಿಗಳನ್ನೂ, ಪೆಟ್ಟಿಗೆಯಲ್ಲಿದ್ದ ಎಲ್ಲಾ ಹಣವನ್ನೂ ಎತ್ತಿಕೊಂಡು ಹೋಗಿ ಬಿಡುವಾ !" ಎಂದು ಹೇಳಿದಳು. ತಾಯಿಯ ಮಾತು ಕೇಳಿ ಮಗಳ ಮುಖವು ಮೊರದಷ್ಟಾಯಿತು.

ಮರುದಿನ ಬಾಬಣ್ಣ ಹದಿನೈದು ಹೊಸ ಬುಟ್ಟಿಗಳನ್ನು ತಂದು ಅಂಗಳದ ಬದಿಯಲ್ಲಿಟ್ಟನು. ಸಾಯಂಕಾಲದಲ್ಲಿ ಆವನು ಗಾಡಿಯೊಲೆಯನ್ನು ಹಚ್ಚಿ ನಿಗಿನಿಗಿ ಉರಿಸಿಕೊಂಡು ಪಿಶಾಚಿಗಳ ಬರುವಿಕೆಯನ್ನು ಕಾದಿದ್ದನು. ಕತ್ತಲೆಯಾದ ಮೇಲೆ ಪಿಶಾಚಿ ತಾಯಿಯೂ ಮಗಳೂ ಬಂದರು. ಬರುವಾಗಲೇ



ಬುಟ್ಟಿಗಳನ್ನು ನೋಡಿ, "ಎಲ್ಲಿ? ಎಲ್ಲಾ ಖಾಲಿ ಬುಟ್ಟಿಗಳು!" ಎಂದು ಚಾಚಿದ ನಾಲಗೆಯನ್ನು ಒಳಗೆಳೆದುಕೊಂಡುವು.

"ಬನ್ನಿ! ಬನ್ನಿ! ಮದುಮಗಳಿಗೆ ಶುಭವಾಗಲಿ! ಹೀಗೆ ಬನ್ನಿ!" ಎಂದು ಸಂಭ್ರಮದಲ್ಲಿ ಬಾಬಣ್ಣನೂ ಸ್ವಾಗತ ಹೇಳಿದ.

"ಅಲ್ಲಿ ಮದುವೆಗೆ ಬಂದವರೆಲ್ಲ ಕಾದು ಕುಳಿತಿದ್ದಾರೆ. ನೀನು ಇನ್ನೂ ಬರ್ಫಿಗಳನ್ನು ತುಂಬಿಸದೆ ಹದಿನೈದು ಬುಟ್ಟಿಗಳನ್ನೂ ಖಾಲಿಯಾಗಿಟ್ಟಿರುವೆಯಲ್ಲಾ! ಎಂಥಾ ಮೋಸ! ಸುಮ್ಮನೆ ಬಿಟ್ಟೇವೇ!" ಎಂದು ತಾಯಿ ಪಿಶಾಚಿ ಗದರಿಸಿ ಕೇಳಿದಳು.

"ನಾನು ಹೇಳುವ ಸಮಾಚಾರ ಸ್ವಲ್ಪ ಕೇಳಿರಿ. ಈ ಊರಿನಲ್ಲಿ ಮಿಠಾಯಿ ವ್ಯಾಪಾರಮಾಡುವವರನ್ನು ಯಾವುದೋ ಎರಡು ಪಿಶಾಚಿಗಳು ಪೀಡಿಸುತ್ತವಂತೆ. ಅವುಗಳು ಮೋಸಮಾಡಿ, ಹೆದರಿಸಿ ಮಿಠಾಯಿ ಬುಟ್ಟಿಗಳನ್ನೇ ಹೊತ್ತುಕೊಂಡು ಹೋಗುತ್ತವಂತೆ. ನನ್ನ ಮಿತ್ರನೊಬ್ಬ ಎಲ್ಲಾ ಮಂತ್ರಗಳನ್ನೂ ಕಲಿತ ಭೂತ ಸಂಹಾರಕನಾಗಿದ್ದಾನೆ. ಅವನು ಬಂದು ಈ ದಿನ ರಾತ್ರಿ ಪಿಶಾಚಿಗಳಿಗೆ ಮಾರಣ ಹೋಮ ಮಾಡುತ್ತೇನೆಂದು ಹೇಳಿದ್ದಾನೆ. ಗಾಡಿಯೊಲೆ ಹಚ್ಚಿ ತಯಾರಾಗಿಡಲು ಹೇಳಿದ್ದಾನೆ. ಆ ಮಾರಣ ಹೋಮಕ್ಕೆ ಬೇವಿನ ಕಟ್ಟಿಗೆಗಳೇ ಆಗಬೇಕಂತೆ. ಅವುಗಳನ್ನು ತರಲು ಹೋಗಿದ್ದಾನೆ. ನಿಮ್ಮ ಬರ್ಫಿ ಒಳಗೆ ಅಡಗಿಸಿಟ್ಟಿದ್ದೇನೆ. ಅವನು ಬಂದು ಮಾರಣ ಹೋಮಮಾಡಿ ಮುಗಿಸಿದ ಕೂಡಲೇ ನಿಮ್ಮ ಮಿಠಾಯಿ ಒಯ್ಯಿರಿ" ಎಂದನು ಬಾಬಣ್ಣ.

ಭೂತವೈದ್ಯನೆಂದೂ ಮಾರಣಹೋಮವೆಂದೂ ಕೇಳಿದ ಕೂಡಲೇ ಪಿಶಾಚಿಗಳಿಗೆ ಭಯವಾಯಿತು. ಆಗಲೇ ಬೀದಿ ಬಾಗಿಲನ್ನು ಯಾರೋ ತಟ್ಟುತ್ತ, "ಬಾಬಣ್ಣಾ, ಎಲ್ಲಾ ತಯಾರಾಯಿತೋ? ಒಲೇ ಚೆನ್ನಾಗಿ ಉರೀಲಿ! ಬಾಗಿಲು ತೆರಿ. ಪಿಶಾಚಿಗಳು ತಿರುಗುವ ಹೊತ್ತು ಸಮೀಪಿಸಿತು." ಎಂದು ಕೂಗಿ ಹೇಳಿದರು. ಹಾಗೆ ಬಂದವನು ಬಾಬಣ್ಣನು ಈ ಮೊದಲೇ ಏರ್ಪಡಿಸಿಟ್ಟ ಬಾಬಣ್ಣನ ಮನುಷ್ಯನೇ.

"ಅಗೋ! ಭೂತಮಂತ್ರವಾದಿ ಬಂದ!" ಎಂದ ಬಾಬಣ್ಣ. ಮರುಕ್ಷಣದಲ್ಲಿ ಆ ಪಿಶಾಚಿಗಳೆರಡೂ ಕರೀಬೆಕ್ಕುಗಳಾಗಿ ಕತ್ತಲೆಯಲ್ಲಿ ಮಾಯವಾದುವು.

ಆಮೇಲೆ ಆ ಪಿಶಾಚಿಗಳು ಆ ಊರಿನ ನೆರಳಿಗೂ ಬರಲಿಲ್ಲ. ಮಾರಣೇ ದಿನ ಬಾಬಣ್ಣ ಪಿಶಾಚಿಗಳ ಉಚ್ಚಾಟನೆಯ ಸಂಗತಿಯನ್ನು ಇತರ ಮಿಠಾಯಿ ಅಂಗಡಿಯವರಿಗೆ ಹೇಳಿ, "ಅವುಗಳಿಂದ ನಿಮಗೆಲ್ಲಾ ತುಂಬಾ ನಷ್ಟವಾಗಿದೆ. ತಗೊಳ್ಳಿ" ಎಂದು ಹೇಳಿ, ತಾನು ಪಡೆದ ಐನೂರು ರೂಪಾಯಿಗಳನ್ನು ಅವರಿಗೆಲ್ಲಾ ಹಂಚಿಕೊಟ್ಟನು.






ಋಷಿಶ್ರೇಷ್ಠನೆನಿಸಿದ ಯಾಜ್ಞವಲ್ಕ್ಯನು ವಿಶ್ವಾಮಿತ್ರ ಸಂತತಿಗೆ ಸೇರಿದವನು. ವಿಶ್ವಾಮಿತ್ರನು ದೇವರಾತ ಎಂಬುವನನ್ನು ಸಾಕಿಕೊಂಡಿದ್ದನು. ದೇವರಾತನು ತನಗೆ ಮಗನೊಬ್ಬನು ಹುಟ್ಟಬೇಕೆಂಬ ಇಚ್ಛೆಯಿಂದ ಶಿವನನ್ನು ಕುರಿತು ತಪಸ್ಸುಮಾಡಿದನು. ಅವನ ತಪಸ್ಸಿಗೆ ಮೆಚ್ಚಿ ಶಿವನು ಪ್ರತ್ಯಕ್ಷನಾಗಿ ಏನು ವರ ಬೇಕೋ ಕೇಳುವಂತೆ ಹೇಳಲು ದೇವರಾತನು, "ನನಗೆ ನಿನ್ನಂತಹ ಮಗನು ಹುಟ್ಟಬೇಕು. ಆ ವರವನ್ನು ಕೊಡು" ಎಂದು ಕೇಳಿದನು.

"ನನಂತಹವನು ನಾನೇ ಹೊರತು ಬೇರೆ ಯಾರೂ ಇಲ್ಲ. ಆದುದರಿಂದ ನಾನೇ ನಿನಗೆ ಮಗನಾಗಿ ಹುಟ್ಟಿ, ಭೂಮಿಯ ಮೇಲೆ ಶುಕ್ಲಯಜುರ್ವೇದವು ವ್ಯಾಪಿಸಿಕೊಳ್ಳುವಂತೆ ಮಾಡುತ್ತೇನೆ" ಎಂದನು ಶಿವ.

ದೇವರಾತನು ಸಂತೋಷದಿಂದ ಮನೆಗೆ ಬಂದು ಯಜ್ಞಮಾಡ ತೊಡಗಿದನು. ಆ ಯಜ್ಞ ವೇದಿಕೆಯ ಮೇಲೆ ಕಾಂತಿಕಿರಣಗಳನ್ನು ಸೂಸುವ ಬಾಲಕನೊಬ್ಬನು ಪ್ರತ್ಯಕ್ಷನಾಗಿ ದೇವರಾತನನ್ನು "ಅಪ್ಪಾ" ಎಂದು ಕರೆದನು. ದೇವರಾತನು ಆ ಹುಡುಗನಿಗೆ ಯಾಜ್ಞವಲ್ಕ್ಯನೆಂದು ಹೆಸರಿಟ್ಟು ಬೆಳೆಯಿಸ ತೊಡಗಿದನು.

ಯಾಜ್ಞವಲ್ಕ್ಯನು ವೈಶಂಪಾಯನನ ಶಿಷ್ಯನಾಗಿ ಸಕಲ ಶಾಸ್ತ್ರಗಳನ್ನೂ ಕಲಿತು ಪ್ರಖ್ಯಾತಿ ಹೊಂದಿದನು. ಆದರೂ ಅವನು ಋಗ್ವೇದ, ಸಾಮವೇದ ಮತ್ತು ಅಥರ್ವಣ ವೇದಗಳನ್ನು ಇತರ ಮುನಿಗಳ ಹತ್ತಿರ ಕಲಿತನು. ಯಜುರ್ವೇದವನ್ನು ಮಾತ್ರ ವೈಶಂಪಾಯನನ ಹತ್ತಿರವೇ ಕಲಿತು ಮುಗಿಸಿದ್ದನು.

ಅವನ ಗುರುವಾದ ವೈಶಂಪಾಯನನು ವ್ಯಾಸನ ಶಿಷ್ಯರಲ್ಲಿ ಒಬ್ಬನಾಗಿದ್ದವನು. ಒಂದುಸಾರಿ ವೈಶಂಪಾಯನನಿಗೆ ಬ್ರಹ್ಮಹತ್ಯೆಯ ದೋಷವು ಅಂಟಿಕೊಳ್ಳುವ ಹಾಗಾಯಿತು. ಅದು ಹೇಗೆಂದರೆ, ಕೆಲವಂದಿ ಋಷಿಗಳು ಮೇರುಪರ್ವತಕ್ಕೆ ಹೋಗಿ ಏಳು ದಿನಗಳಲ್ಲಿ ಹಿಂದಿರುಗಿ ಬರಬೇಕೆಂದೂ, ಹಾಗೆ ಬರಲಾರದೆ ಹೋದವನಿಗೆ ಬ್ರಹ್ಮಹತ್ಯಾ ಪಾಪ ಬರಲೆಂದೂ ಪಂಥ ಹಾಕಿಕೊಂಡರು. ವೈಶಂಪಾಯನನಿಂದ ಹಾಗೆ ಹಿಂದಿರುಗಿ ಬರಲು ಅಸಾಧ್ಯವಾಯಿತು. ಹೀಗೆ ಬ್ರಹ್ಮಹತ್ಯೆಯ ಪಾಪ ಮಾನಸಿಕವಾಗಿ ಅಂಟಿಕೊಂಡರೆ ಅದು ಪ್ರತ್ಯಕ್ಷವಾಗುವಂತೆ ಒಂದು ಘಟನೆಯೂ ನಡೆಯಿತು. ಒಂದು ದಿನ ಅವನು ಶಿಷ್ಯರಿಗೆ ಇಂದ್ರವಜ್ರಸ್ತವ ಮಂತ್ರವನ್ನು ಹೇಳಿ

ಕೊಡುತ್ತಿದ್ದಾಗ ಆಯುಷ್ಯ ತೀರುತ್ತಾ ಬಂದ ಬಾಲಕನೊಬ್ಬ ಅವರ ನಡುವಿಗೆ ನಡೆಯುತ್ತಾ ಬಂದನು. ಮಂತ್ರೋಪದೇಶಕ್ಕೆ ಅಭ್ಯಂತರವಾಗಲು ವೈಶಂಪಾಯನನು ಕನಲಿ ಕೈಯಲ್ಲಿದ್ದ ದರ್ಭೆಯಿಂದ ಆ ಹುಡುಗನನ್ನು ಹೊಡೆಯಲು, ಅದು ವಜ್ರಾಯುಧದ ಏಟಿನಂತೆ ತಾಗಿ, ಆ ಹುಡುಗನ ಪ್ರಾಣಾಪಹಾರವಾಯಿತು.

ತನಗೆ ಬಂದ ಬ್ರಹ್ಮಹತ್ಯಾ ಪಾಪವನ್ನು ಯಾರು ತೆಗೆದುಕೊಳ್ಳುವಿರೆಂದು ವೈಶಂಪಾಯನನು ತನ್ನ ಶಿಷ್ಯರನ್ನು ಕೇಳಿದನು. ಆಗ ಯಾಜ್ಞವಲ್ಕ್ಯನು "ಅದಕ್ಕೇನು ಕಷ್ಟ ? ನಾನು ತೆಗೆದುಕೊಳ್ಳುತ್ತೇನೆ." ಎಂದು ಹೆಮ್ಮೆಯಿಂದ ಎದೆ ಚಾಚಿ ಹೇಳಿದನು.

ಆ ಮಾತು ಕೇಳಿ ವೈಶಂಪಾಯನನಿಗೆ ಕೋಪ ಬಂತು. "ನಿನಗಿಷ್ಟು ಮದವೆ ? ನಾನು ಕಲಿಸಿ ಕೊಟ್ಟ ವಿದ್ಯೆಯನ್ನು ನನಗೇ ವಾಪಾಸು ಕೊಟ್ಟು ಹೊರಟು ಹೋಗು!" ಎಂದನು.

"ನಿಮ್ಮಿಂದಾಗದ ಕೆಲಸವನ್ನು ನಾನು ಅವಲೀಲೆಯಾಗಿ ಮಾಡುವೆನೆಂದರೆ ಕೋಪವೇಕೋ ? ತನ್ನ ಬ್ರಹ್ಮಹತ್ಯೆಯನ್ನು ಇನ್ನೊಬ್ಬರ ಮೇಲೆ ಹೊರಳಿಸದೆ ಸ್ವಶಕ್ತಿಯಿಂದಲೇ ಅದನ್ನು ಹೋಗಲಾಡಿಸಿಕೊಳ್ಳಬೇಕಲ್ಲವೆ? " ಎಂಬುದನ್ನು ಗುರುವಿಗೆ ಸ್ಫುರಿಸುವಂತೆ ಯಾಜ್ಞವಲ್ಕ್ಯನು ಹೇಳಿದ್ದನು. ಆದುದರಿಂದ ಅವನನ್ನು ಗುರುವನ್ನು ಮಿಂಚಿದ ಶಿಷ್ಯನೆಂದೂ ಹೇಳಬಹುದು. ಅಭಿಮಾನಿಯಾದ ಯಾಜ್ಞವಲ್ಕ್ಯನು ವೈಶಂಪಾಯನನಿಂದ ಕಲಿತುದನ್ನೆಲ್ಲ, ಅವನಿಗೆ ಬಿಟ್ಟುಕೊಟ್ಟು, ಸೂರ್ಯನನ್ನು ಆರಾಧಿಸಿ ಮರೆತುದನ್ನೆಲ್ಲ ಜ್ಞಾಪಕಕ್ಕೆ ಬರಿಸಿಕೊಳ್ಳುವ ಶಕ್ತಿಯನ್ನು ಪಡೆದನು.

ಯಜುರ್ವೇದವನ್ನು ಮೊದಲು ವ್ಯಾಸನು ವೈಶಂಪಾಯನನಿಗೇ ಕಲಿಸಿದ್ದನು. ಅವನಿಂದ ಯಾಜ್ಞವಲ್ಕ್ಯನು ಕಲಿತು ಪ್ರಖ್ಯಾತಗೊಳಿಸಿದನು.

ಯಾಜ್ಞವಲ್ಕ್ಯನು ಒಮ್ಮೆ ಜನಕ ಮಹಾರಾಜನ ಸಭೆಯ ತಾತ್ವಿಕ ಚರ್ಚೆಯಲ್ಲಿ ಸೇರಿ ಅನೇಕಮಂದಿ ಬ್ರಾಹ್ಮಣ ವಿದ್ವಾಂಸರನ್ನು ಗೆದ್ದು ಜನಕ ರಾಜನಿಂದ ಅಪಾರ ಧನವನ್ನು ಬಹುಮಾನ ಪಡೆದನು. ಅದರೊಂದಿಗೆ ಬ್ರಾಹ್ಮಣರ ಕೋಪಕ್ಕೂ ಪಾತ್ರನಾದನು.

ಯಾಜ್ಞವಲ್ಕ್ಯನಿಗೆ ಮೈತ್ರೇಯಿ ಮತ್ತು ಕಾತ್ಯಾಯಿನಿ ಎಂಬ ಇಬ್ಬರು ಪತ್ನಿಯರಿದ್ದರು. ಕಡೆಗೆ ಯಾಜ್ಞವಲ್ಕ್ಯನು ಮನೆ ಬಿಟ್ಟು ತಪಸ್ಸಿಗೆ ಹೋಗುವಾಗ ತನ್ನ ಧನವನ್ನು ಇಬ್ಬರು ಹೆಂಡತಿಯರಿಗೂ ಹಂಚಿ ಕೊಟ್ಟನು. ಆಗ ಮೈತ್ರೇಯಿ, "ನನಗೆ ಧನ ಬೇಡ. ಅದೆಲ್ಲವನ್ನೂ ಕಾತ್ಯಾಯಿನಿಗೇ ಕೊಡಿರಿ. ನೀವು ಧನಕ್ಕಿಂತ ಹೆಚ್ಚಿನದಾದುದನ್ನು ಪಡೆಯಲು ಹೋಗುವಿರಿ. ಅಂತಹ ತತ್ವೋಪದೇಶವೇ ನನಗೂ ಬೇಕು." ಎಂದು ಗಂಡನಿಂದ ತತ್ವೋಪದೇಶಗಳನ್ನು ತುಂಬಾ ಪಡೆದಳು.



# ಇಂದ್ರನಾದ ರಾಜ



ಒಂದು ಸಾರಿ ಇಂದ್ರನಿಗೆ ವಿಶ್ವರೂಪನೆಂಬವನನ್ನು ಕೊಲ್ಲಬೇಕಾಯಿತು. ಆ ಕೊಲೆಯಿಂದ ಬಂದ ಪಾಪಕ್ಕೆ ಹೆದರಿ ಇಂದ್ರನು ಓಡಿ ಹೋಗಿ ಎಲ್ಲಿಯೋ ಸರೋವರದ ಮಧ್ಯದಲ್ಲಿ ಅಡಗಿದನು. ಇಂದ್ರ ಪದವಿ ಅನಾಥವಾಯಿತು.

ಆಸಮಯದಲ್ಲಿ ಭೂಲೋಕದಲ್ಲಿ ನಹುಷನೆಂಬ ದೊಡ್ಡ ರಾಜನು ಪಾಲಿಸಿಕೊಂಡಿದ್ದನು. ಅವನು ರಾಕ್ಷಸರನ್ನು ಕೊಂದು, ಯಜ್ಞಗಳನ್ನು ಮಾಡಿ ಮಾನವೋತ್ತಮನೆನಿಸಿಕೊಂಡವನು.







ಇಂದ್ರ ಪದವಿ ಶೂನ್ಯವಾಗಿರುವುದು ಒಳಿತಲ್ಲವೆಂದುಕೊಂಡು, ದೇವತೆಗಳು ತಮ್ಮೊಳಗೆ ಮಾತಾಡಿಕೊಂಡು, ನಹುಷನನ್ನೇ ಇಂದ್ರ ಪದವಿಯಲ್ಲಿ ಕೂಡಿಸುವುದೆಂದು ನಿಶ್ಚಯಿಸಿದರು.



ನಹುಷನು ದೇವತೆಗಳ ಕೋರಿಕೆಯನ್ನೂ, ಋಷಿಗಳ ಒತ್ತಾಯವನ್ನೂ ನಿರಾಕರಿಸಲಾಗದೆ ಸ್ವರ್ಗಲೋಕಕ್ಕೆ ಹೋಗಿ ಇಂದ್ರನ ಸಿಂಹಾಸನದಲ್ಲಿ ಆಸೀನನಾದನು. ಆ ವಿಧವಾಗಿ ಒಬ್ಬ ಮಾನವ ರಾಜನಿಗೆ ಇಂದ್ರ ಪದವಿ ಲಭಿಸಿತು.



ನಹುಷನು ಸ್ವಲ್ಪಕಾಲ ನಮ್ರತೆಯಿಂದ ವ್ಯವಹರಿಸಿಕೊಂಡಿದ್ದರೂ ಕ್ರಮವಾಗಿ ಅವನಲ್ಲಿ ಅಹಂಕಾರವು ಹೆಚ್ಚುತ್ತಾ ಬಂದಿತು. ಒಂದು ದಿನ ಅವನು ಇಂದ್ರನ ಪತ್ನಿಯಾದ ಶಚೀದೇವಿಯನ್ನು ನೋಡಿದನು.



ನಹುಷನು ದೇವ ಸಭೆಯಲ್ಲಿ, "ನಾನು ಈಗ ಇಂದ್ರನಾಗಿರುವೆನಾದುದರಿಂದ, ಶಚೀದೇವಿಯೂ ನನಗೆ ಪತ್ನಿಯಾಗ ತಕ್ಕದ್ದು" ಎಂದು ಹೇಳಿದನು. ಆ ಮಾತು ಕೇಳಿ ದೇವತೆಗಳಿಗೆ ದಿಗ್ಭ್ರಮೆ ಹಿಡಿಯಿತು.

ಈ ಸಂಗತಿ ತಿಳಿದು ಶಚೀದೇವಿಯೂ ತುಂಬಾ ಆಂದೋಳನಗೊಂಡಳು. ಕಡೆಗೆ ದೇವಗುರು ಬೃಹಸ್ಪತಿಯನ್ನು ಕರೆಯಿಸಿ ಅವನ ಆಲೋಚನೆಯನ್ನು ಕೇಳಿದನು.







ಬೃಹಸ್ಪತಿ ತನ್ನ ಆಲೋಚನೆಯನ್ನು ಅವಳಿಗೆ ಹೇಳಿದನು. ಅದರಂತೆ ನಹುಷನು ತನ್ನ ಬಳಿಗೆ ಪಲ್ಲಕಿಯಲ್ಲಿ ಸಪ್ತ ಋಷಿಗಳಿಂದ ಹೊರಿಸಲ್ಪಟ್ಟು ಬಂದರೆ, ತಾನು ಅವನನ್ನು ಪತಿಯಾಗಿ ಸ್ವೀಕರಿಸುವೆನೆಂದು ಶಚೀದೇವಿ ಸುದ್ದಿ ಕಳುಹಿಸಿದಳು.



ನಹುಷೇಂದ್ರನ ಆಜ್ಞೆಯಂತೆ ಸಪ್ತರ್ಷಿಗಳೂ ಅವನು ಕುಳಿತ ಪಲ್ಲಕಿಯನ್ನು ಹೊತ್ತುಕೊಂಡು ನಡೆದರು. ಅವರಲ್ಲಿ ಅಗಸ್ತ್ಯನು ಗಿಡ್ಡನಾದುದರಿಂದ ವೇಗವಾಗಿ ನಡೆಯದೆ ನಿಂತು ನಿಂತು ಅಡಿ ತೆಗೆಯುವುದನ್ನು ನೋಡಿ, ಅವಸರಪಡುತ್ತಿದ್ದ ನಹುಷನು ಕೋಪದಿಂದ ಅಗಸ್ತ್ಯನನ್ನು ಕಾಲಿನಿಂದ ಒದ್ದನು.



ತನ್ನನ್ನು ಕಾಲಿನಿಂದ ಒದ್ದ ನಹುಷನು ಕಾಲಿಲ್ಲದ ಹಾವಾಗುವಂತೆ ಕೋಪ ಗೊಂಡ ಅಗಸ್ತ್ಯನು ಶಪಿಸಿದನು. ಕೂಡಲೇ ನಹುಷನು ಹಾವಾಗಿ ಭೂಮಿಗೆ ಬಿದ್ದನು.



ಆಮೇಲೆ ಅಗಸ್ತ್ಯನು ನಹುಷನ ಮೇಲೆ ಕನಿಕರ ಪಟ್ಟು, ಒಬ್ಬ ಮಹನೀಯನಿಂದ ಅವನ ಶಾಪವು ವಿಮೋಚನೆಯಾಗುವಂತೆ ಅನುಗ್ರಹ ಕೊಟ್ಟನು. ಮುಂದೆ ಒಂದು ದಿನ ಆ ಹಾವು ಭೀಮನನ್ನು ಹಿಡಿದುಕೊಂಡಿತು.



ಧರ್ಮರಾಜನು ಬಂದು ತನ್ನ ತಮ್ಮನನ್ನು ಬಿಟ್ಟು ಬಿಡುವಂತೆ ಹಾವನ್ನು ಪ್ರಾರ್ಥಿಸಿದನು. ಹಾವು ಕೇಳಿದ ಪ್ರಶ್ನೆಗಳಿಗೆ ಧರ್ಮರಾಜನು ಸರಿಯಾದ ಉತ್ತರ ಕೊಟ್ಟುದರಿಂದ, ಹಾವು ಭೀಮನನ್ನು ಬಿಟ್ಟು ಕೊಟ್ಟಿತು. ಶಾಪ ವಿಮೋಚನೆಯೂ ಆಗಿ ನಹುಷನು ಸ್ವರ್ಗ ಸೇರಿದನು.



# ರಾಜನಾದ ವೈಶ್ಯಕುಮಾರ

ಪುರಾಣ ಕಾಲದಲ್ಲಿ ಧೃಷ್ಟನೆಂಬ ಒಬ್ಬ ಕ್ಷತ್ರಿಯ ರಾಜನಿದ್ದನು. ಅವನಿಗೆ ನಾಭಾಗನೆಂಬ ಒಬ್ಬ ಮಗನಿದ್ದನು. ಅವನು ಪ್ರಾಯಕ್ಕೆ ಬರುವಾಗ ಸುಪ್ರಭೆ ಎಂಬ ವೈಶ್ಯ ಕನ್ಯೆಯನ್ನು ಮೋಹಿಸಿ, ಅವಳನ್ನು ತನಗೆ ಕೊಟ್ಟು ಮದುವೆಮಾಡುವಂತೆ ಅವಳ ತಂದೆಯನ್ನು ಕೇಳಿದನು. ಅದುವರೆಗೆ ಇಂತಹ ಮದುವೆ ಎಲ್ಲಿಯೂ ಆಗಿರಲಿಲ್ಲ. ಕ್ಷತ್ರಿಯ ಯುವಕನು ವೈಶ್ಯ ಕನ್ಯೆಯನ್ನು ಮದುವೆಯಾಗುವುದು ಒಳ್ಳೆಯದಲ್ಲವೆಂದು ಸುಪ್ರಭೆಯ ತಂದೆ ಹೇಳಿದನು. ಆದರೂ ನಾಭಾಗನು ಬಿಡದೆ ಅವಳನ್ನೇ ಮದುವೆಯಾಗುವೆನೆಂದು ಗಟ್ಟಿ ಹಟ ಹಿಡಿದನು.

"ನಿನಗೂ ನನಗೂ ಎಲ್ಲರಿಗೂ ರಾಜನಾಗಿ ನಿನ್ನ ತಂದೆಯೇ ಇರುವರಲ್ಲವೇ ? ಈ ಪ್ರಶ್ನೆಯನ್ನು ಅವರ ಮುಂದಿಟ್ಟು ನಿರ್ಣಯ ತಿಳಿಯೋಣ" ಎಂದನು ಸುಪ್ರಭೆಯ ತಂದೆ. ನಾಭಾಗನು ಸರಿಯೆಂದನು. ಇಬ್ಬರೂ ಧೃಷ್ಟನ ಬಳಿಗೆ ಹೋಗಿ ತಮ್ಮ ತಗಾದೆಯನ್ನು ಹೇಳಿಕೊಂಡರು. ತೆಗೆದ ಬಾಯಿಗೆ ಧೃಷ್ಟರಾಜನು ಈ ಮದುವೆ ನ್ಯಾಯವೂ ಧರ್ಮವೂ ಅಲ್ಲವೆಂದೇ ಹೇಳಿಬಿಟ್ಟನು.

ಇನ್ನು ಸುಮ್ಮನಿದ್ದರಾಗದೆಂದು ನಾಭಾಗನಿಗೆ ತೋರಿತು. ಕನ್ಯೆಯನ್ನು ಅಪಹರಿಸಿಕೊಂಡು ಹೋಗಿ ವಿವಾಹಮಾಡಿಕೊಳ್ಳುವುದು ರಾಕ್ಷಸ ಪದ್ಧತಿ ಎನಿಸುತ್ತಿತ್ತು. ನಾಭಾಗನು ಆ ಪದ್ಧತಿಯನ್ನು ಹಿಡಿದು, ಸುಪ್ರಭೆಯನ್ನು ಅಪಹರಿಸಿಕೊಂಡು ಹೋಗಿ ಮದುವೆಯಾದನು. ಇದನ್ನು ಸಹಿಸದಿದ್ದ ಸುಪ್ರಭೆಯ ತಂದೆ ಧೃಷ್ಟರಾಜನ ಮುಂದೆ ಹೋಗಿ ಫಿರ್ಯಾದಿ ಮಾಡಿದನು. ಧೃಷ್ಟನು ತನ್ನ ಮಗನೊಂದಿಗೇ ಯುದ್ಧಕ್ಕೆ ಸಿದ್ಧನಾದನು. ನಾಭಾಗನೂ ಬಿಡದೆ ತಂದೆಯೊಂದಿಗೆ ಯುದ್ಧಕ್ಕೆ ತೊಡಗಿದನು.

ಅವರಿಬ್ಬರೂ ಯುದ್ಧಮಾಡುತ್ತಿದ್ದಾಗ ಪರಿವ್ರಾಜಕನೊಬ್ಬನು ಆ ಕಡೆಗೆ ಬಂದು, ಅವರ ಯುದ್ಧಕ್ಕೆ ಕಾರಣವನ್ನು ಕೇಳಿ ತಿಳಿದುಕೊಂಡು, "ಹಾಗಿದ್ದರೆ ಈ ಯುದ್ಧವೇ ಅರ್ಥವಿಲ್ಲದುದು. ನಾಭಾಗನು ವೈಶ್ಯ ಸ್ತ್ರೀಯನ್ನು ಮದುವೆಯಾದುದರಿಂದ ವೈಶ್ಯನಾದಂತಾಯಿತು. ಕ್ಷತ್ರಿಯನು ವೈಶ್ಯನೊಂದಿಗೆ ಯುದ್ಧ ಮಾಡುವುದು ಧರ್ಮವೇ ಅಲ್ಲ!" ಎಂದು ಧೃಷ್ಟನಿಗೆ ತನಗೆ ತೋರಿದ ಧರ್ಮವನ್ನು ತಿಳಿಯಪಡಿಸಿದನು. ಹೀಗೆ ತಂದೆ ಮಗಂದಿರೊಳಗಿನ ಯುದ್ಧ ನಿಂತಿತು.

ಧೃಷ್ಟನು ನಾಭಾಗನಿಗೆ ವೈಶ್ಯ ವೃತ್ತಿಯನ್ನೇ ಅವಲಂಬಿಸಿ ಜೀವಿಸುವಂತೆ ಆಜ್ಞೆಮಾಡಿದನು. ಅದರಂತೆ ನಾಭಾಗನು ವೈಶ್ಯವೃತ್ತಿಯಾದ ವ್ಯಾಪಾರ ವನ್ನು ಹಿಡಿದು ಜೀವನ ನಡೆಯಿಸಿಕೊಂಡು ಬಂದನು.

ಸ್ವಲ್ಪ ಕಾಲದಲ್ಲಿ ಅವನ ಪತ್ನಿ ಸುಪ್ರಭೆ ಒಬ್ಬ ಮಗನನ್ನು ಹಡೆದಳು. ಭನಂದನೆಂಬ ಹೆಸರಿನ ಆ ಮಗನು ಬೆಳೆದು ದೊಡ್ಡವನಾದ ಮೇಲೆ, "ನಾನು ಬದುಕು ನಡೆಸಲು ಯಾವ ವೃತ್ತಿಯನ್ನು ಅವ ಲಂಬಿಸಲಿ?" ಎಂದು ತನ್ನ ತಾಯಿಯನ್ನು ಕೇಳಿದನು.

"ಗೋವುಗಳನ್ನು ಕಾಯಿ" ಎಂದಳು ತಾಯಿ. ಆಗ ಭೂಮಿಯನ್ನು ಗೋರೂಪದಲ್ಲಿ ಭಾವಿಸು ತ್ತಿದ್ದರು. ಅಂತಲೇ ಭನಂದನಿಗೆ ಭೂಮಿಯನ್ನು ಸಂಪಾದಿಸಬೇಕೆಂದು ತೋರಿತು. ಅವನಿಗೆ ತನ್ನ ವಂಶದ ಕಥೆ ಗೊತ್ತಿತ್ತು. "ಗೋರೂಪಿಣಿಯಾದ ಭೂಮಿಯನ್ನು ಶತ್ರುರಾಜನು ಪಾಲಿಸುತ್ತಿದ್ದಾನೆ. ಅವನಿಂದ ರಾಜ್ಯವನ್ನು ಕಿತ್ತುಕೊಳ್ಳುವುದು ತನ್ನ ಧರ್ಮ. ಅದಕ್ಕಾಗಿ ಬಲವರ್ಧನೆ ಮಾಡಿಕೊಳ್ಳ ಬೇಕೆಂದು ಅವನು ಹಿಮಾಲಯದ ಕಡೆಗೆ ಹೋದನು.

ಹಿಮಾಲಯದಲ್ಲಿ ನೀಪನೆಂಬ ರಾಜರ್ಷಿ ತಪಸ್ಸು ಮಾಡಿಕೊಂಡಿದ್ದನು. ಭನಂದನು ನೀಪನಿಗೆ ನಮಸ್ಕಾರ ಮಾಡಿ, ತನ್ನ ಸಮಸ್ಯೆಯನ್ನು ಹೇಳಿಕೊಂಡು ಪರಿ ಹಾರ ಕೇಳಿದನು. ನೀಪನು ಅಸ್ತ್ರ ವಿದ್ಯೆಗಳನ್ನು ಚೆನ್ನಾಗಿ ಜೀರ್ಣಿಸಿಕೊಂಡವನು. ಅವನು ಸಂತೋಷ ದಿಂದ ಭನಂದನಿಗೆ ತನಗೆ ತಿಳಿದ ವಿದ್ಯೆಗಳನ್ನೆಲ್ಲಾ ಉಪದೇಶಿಸಿದನು.

ಹೀಗೆ ಶಾಸ್ತ್ರಾಸ್ತ್ರ ವೀರನಾಗಿ ಭನಂದನು ಹಿಂದಿ ರುಗಿ ಬಂದಾಗ, ಧೃಷ್ಟನು ಸತ್ತುಹೋಗಿ, ರಾಜ್ಯವನ್ನು ನಾಭಾಗನ ತಮ್ಮನಾದ ವಸುರಾತನು ಆಳಿ ಕೊಂಡಿದ್ದನು. ಭನಂದನು ವಸುರಾತನೊಂದಿಗೆ, ತನ್ನ ತಂದೆಯ ಭಾಗವಾದ ಅರ್ಧ ರಾಜ್ಯವನ್ನಾದರೂ ತನಗೆ ಕೊಡಬೇಕೆಂದು ಕೇಳಿದನು. ವಸುರಾತನು ಅದಕ್ಕೆ ಒಪ್ಪದೆ, "ನಿನ್ನ ತಂದೆ ವೈಶ್ಯಸ್ತ್ರೀಯನ್ನು ಮದುವೆಯಾಗಿ, ವೈಶ್ಯನಾಗಿ ರಾಜನಾಗುವ ಅರ್ಹತೆ ಕಳೆದು ಕೊಂಡವನು. ಅವನಿಗಿಲ್ಲದ ರಾಜ್ಯಾರ್ಹತೆ ನಿನಗೂ ಇಲ್ಲ. ನಡೆ" ಎಂದು ಹೇಳಿಬಿಟ್ಟನು.

ಭನಂದನು ಬಿಡದೆ ವಸುರಾತನೊಂದಿಗೆ ಯುದ್ಧ ಮಾಡಿ, ವಸುರಾತನನ್ನು ಕೊಂದು ಪೂರ್ತಿ ರಾಜ್ಯ ವನ್ನೇ ಸಂಪಾದಿಸಿಕೊಂಡನು. ಆದರೆ ಅದನ್ನು ತಾನೊಬ್ಬನೇ ಪಾಲಿಸದೆ, ತಂದೆಗೂ ಅರ್ಧ ರಾಜ್ಯ ವನ್ನು ಒಪ್ಪಿಸಿದನು. ಆಗ ನಾಭಾಗನು, ತಾನು ಅವನಂತೆ ರಾಜನಾಗುವ ಸಾಮರ್ಥ್ಯ ಪಡೆದವನಲ್ಲ ವೆಂದುಕೊಂಡು, "ನೀನೇ ಪಾಲಿಸತಕ್ಕವನು" ಎಂದು ಹೇಳಿ ನಿರಾಕರಿಸಿಬಿಟ್ಟನು. ಹೀಗೆ ವೈಶ್ಯನಾಗಿ ಹುಟ್ಟಿ ದರೂ ಭನಂದನು ಸ್ವಶಕ್ತಿಯಿಂದ ರಾಜನಾದನು.





# ಜಾತಕಜ್ಞಾನಿ

**ಮಾ**ಣಿಕ್ಯಪುರವೆಂಬ ಊರಿಗೆ ಒಂದುಸಾರಿ ಒಬ್ಬರು ಸ್ವಾಮಿಗಳು ಬಂದು ಊರ ಕೊನೆಯ ಒಂದು ಕುಟೀರದಲ್ಲಿ ತಂಗಿದರು. ಅವರ ಜತೆಯಲ್ಲಿ ಇಬ್ಬರು ಶಿಷ್ಯರು ಕೂಡಾ ಇದ್ದರು. ಊರವರು ಅವರ ದರ್ಶನಕ್ಕೆ ಬಂದಾಗ, ಶಿಷ್ಯರು ತಮ್ಮ ಗುರುಗಳು ಮಹಾ ಜಾತಕ ಜ್ಞಾನಿಗಳೆಂದೂ ಊರವರ ಜಾತಕಗಳನ್ನು ಹೇಳಿ, ಜನರು ಕೊಡುವ ಕಾಣಿಕೆಗಳಿಂದ ಗುಡ್ಡದ ಮೇಲಿನ ಪಾಳು ಗುಡಿಯನ್ನು ಜೀರ್ಣೋದ್ಧಾರಮಾಡಿಸಲಿರುವರೆಂದೂ ಹೇಳ ತೊಡಗಿದರು. ಆದರಂತೆ ಬರುವ ಜನರಿಗೆ ಜಾತಕ ಹೇಳಲು ದಿನಾ ಬೆಳಿಗ್ಗೆ ಮೂರು ಗಂಟೆ ಹೊತ್ತನ್ನು ಮೀಸಲಿಟ್ಟಿದ್ದರು. ಆ ಹೊತ್ತಿನಲ್ಲಿ ಜನರು ತಮ್ಮ ಜಾತಕ ಫಲವನ್ನು ತಿಳಿದುಕೊಳ್ಳಲು ಬಂದಾಗ, ಸ್ವಾಮಿಗಳು ಮೊದಲು ಅವರ ಭೂತಕಾಲದ ಸಂಗತಿಗಳನ್ನು ಇದ್ದುದು ಇದ್ದ ಹಾಗೆಯೇ ಹೇಳಿ, ಆ ಮೇಲೆ ಭವಿಷ್ಯತ್ತನ್ನು ಕುರಿತು ಜನರಿಂದ ಪ್ರಶ್ನೆಗಳನ್ನು ಕೇಳಿಸಿ ಉತ್ತರ ಹೇಳುವರು. ಅವರು ಊರಿಗೆ ಹೊಸದಾಗಿ ಬಂದವರಾದರೂ, ಯಾರು ಬಂದು ಕೇಳಿದರೂ ಅವರ ಹೆಸರನ್ನು ಒಂದು ಕಾಗದದಲ್ಲಿ ಬರೆದುಕೊಂಡು, ಒಳಗಿನ ಕೋಣೆಗೆ ಹೋಗಿ, ಸ್ವಲ್ಪ ಹೊತ್ತು ಇದ್ದು ಕಾಗದದಲ್ಲಿ ಅವರ ಪೂರ್ವೋತ್ತರಗಳನ್ನು ಬರೆದುಕೊಂಡು ಬಂದು ಓದಿ ತಿಳಿಸುತ್ತಾರೆ. ಆ ಮೇಲೆ ಭವಿಷ್ಯತ್ತನ್ನು ಕುರಿತು ಪ್ರಶ್ನೆಗೆ ಉತ್ತರ ಕೊಟ್ಟು ಕಾಣಿಕೆ ದುಡ್ಡು ಪಡೆದು ಆಶೀರ್ವದಿಸಿ ಕಳುಹಿಸುತ್ತಾರೆ.

ಊರಿನವರ ಯಾರ ಹೆಸರು ಹೇಳಿದರೂ ಸ್ವಾಮಿಗಳು ಅವರ ಭೂತಕಾಲದ ಸಂಗತಿಗಳನ್ನು ಸರಿಯಾಗಿ ಹೇಳುವುದನ್ನು ನೋಡಿ ಊರ ಜನರಿಗೆಲ್ಲ ಅವರ ಮೇಲೆ ತುಂಬಾ ವಿಶ್ವಾಸ ಉಂಟಾಯಿತು. ಜನರು ಮೇಲೆ ಮೇಲೆ ಬಿದ್ದು ಬರುತ್ತ ಸ್ವಾಮಿಗಳು ಜಾತಕ ಹೇಳಲು ಮೀಸಲಿರಿಸಿದ ಮೂರು ಗಂಟೆಯೊಳಗೆ ತಮ್ಮ ಜಾತಕಗಳನ್ನು ಕೇಳಲು ತವಕಪಡುತ್ತಿದ್ದರು.

ಈ ಬಗೆಯ ಸ್ವಾಮಿಗಳ ಪದ್ಧತಿಯಲ್ಲಿ ಏನೋ ಮೋಸವಿರಬೇಕೆಂದು ವಿನೋದನೆಂಬ ಯುವಕನಿಗೆ ಅನುಮಾನ ಉಂಟಾಯಿತು. ಯಾವುದನ್ನೂ ಒಮ್ಮೆಗೇ ನಂಬುವ ಸ್ವಭಾವ ಅಲ್ಲ ಅವನದು. ಸ್ವಾಮಿಗಳು ಜಾತಕ ತಿಳಿಯಲು ಬಂದ ಮನುಷ್ಯನ ಹತ್ತಿರ ಹೆಸರು ಕೇಳಿ ಬರೆದುಕೊಂಡು ಒಳಕ್ಕೆ ಹೋಗುತ್ತಾರೆ. ಸ್ವಲ್ಪ ಹೊತ್ತಿನ ಮೇಲೆ ಹೊರಗೆ ಬರುತ್ತಾರೆ. ಹಾಗೆ

ಬಿ. ಎ. ರಾವ್



ಬಂದವರು ಜಾತಕದವನ ಪೂರ್ವ ಜೀವಿತದ ವಿವರಗಳನ್ನು ಬಾಯಿಯಿಂದ ಹೇಳದೆ, ಕಾಗದಲ್ಲಿ ಬರೆದುಕೊಂಡುದನ್ನು ಓದಿ ತಿಳಿಸುತ್ತಾರೆ. ಸ್ವಾಮಿಗಳು ಒಳಗೆ ಹೋಗುವಾಗ ಒಬ್ಬ ಶಿಷ್ಯನು ಅವರೊಂದಿಗೇ ಒಳಗೆ ಹೋಗುತ್ತಾನೆ.

"ಸ್ವಾಮಿಗಳು ಒಳಗೆ ಹೋದರೆ ಕೂಡಲೇ ಬರುವುದಿಲ್ಲವಪ್ಪೆ? ಒಳಗೆ ಏನುಮಾಡುತ್ತಾರೆ?" ಎಂದು ವಿನೋದನು ಎರಡನೇ ಶಿಷ್ಯನನ್ನು ಕೇಳಿದನು.

"ಅವರು ಸಮಾಧಿಯಧ್ಯಾನದಲ್ಲಿ ಜಾತಕದವರ ವಿವರ ತಿಳಿದುಕೊಂಡು ಹೇಳುತ್ತಾರೆ. ಶಿಷ್ಯನು ಬರೆದುಕೊಳ್ಳುತ್ತಾನೆ" ಎಂದ ಆ ಎರಡನೇ ಶಿಷ್ಯ. ಆಗಿ ಹೋದ ಪೂರ್ವದ ವಿವರಗಳನ್ನು ಮಾತ್ರ ಹಾಗೆ ಬರೆಯಿಸುವಾಗ ಭವಿಷ್ಯತ್ತನ್ನು ಕೂಡಾ ಏಕೆ ಬರೆಯಿಸಬಾರದು? ಅದನ್ನು ಪ್ರಶ್ನೆ ಕೇಳಿಸಿ ಉತ್ತರ ರೂಪವಾಗಿ ಹೇಳುತ್ತಾರೇಕೆ? ಹಾಗೆ ಅವರು ಹೇಳುವ ಭವಿಷ್ಯವಾಕ್ಯಗಳು ಯಾರಿಗಾದರೂ ನಿಜವಾಗಿದೆಯೇ? ಅದನ್ನು ಕುರಿತು ಯಾರೂ ಆಲೋಚಿಸಿದಂತೆ ಕಾಣಲಿಲ್ಲ.

ಆದುದರಿಂದ ಈ ಸ್ವಾಮಿಗಳ ಜಾತಕವೆಂತಹುದೆಂಬುದನ್ನು ತಾನೇ ಕಂಡು ಹಿಡಿಯಬೇಕೆಂದು ವಿನೋದನು ನಿಶ್ಚಯಿಸಿಕೊಂಡನು.

ರಾತ್ರಿಯಲ್ಲಿ ಊರೆಲ್ಲ ಸದ್ದಡಗಿದ ಮೇಲೆ ವಿನೋದನು ಸ್ವಾಮಿಗಳ ಕುಟೀರದ ಸಮೀಪದಲ್ಲಿ ಅಡಗಿ ಹೊಂಚು ಹಾಕಲುತೊಡಗಿದನು.

ಒಂದು ದಿನ ರಾತ್ರಿ ಸ್ವಾಮಿಗಳು ತಮ್ಮ ಶಿಷ್ಯರೊಂದಿಗೆ, "ಈ ಊರಿನಲ್ಲಿ ಸುಮಾರಾಗಿ ಎಲ್ಲರ ಜಾತಕಗಳನ್ನೂ ಹೇಳಿ ಮುಗಿಸಿದಂತಾಯಿತು. ಆದುದರಿಂದ ಇನ್ನು ಮೂರು ದಿನಗಳ ಮೇಲೆ ನಾನು ಧ್ಯಾನದಲ್ಲಿರುವುದಾಗಿ ಹೇಳಿ ಕುಟೀರವನ್ನು ಮುಚಿಬಿಡೋಣ. ನೀವು ಸಮಯವಿರುವಾಗ ಪಕ್ಕದ ಊರಿಗೆ ಭಿಕ್ಷಾಟನೆಗೆ ಹೋಗಿ ಎಲ್ಲರ ವಿವರಗಳನ್ನೂ ಬರೆದುಕೊಂಡು ಬನ್ನಿ. ಜಾಗರೂಕತೆಯಿಂದ ವೇಷಹಾಕಿರಿ. ಆಮೇಲೆ ನಾವು ಆ ಊರಿಗೆ ಹೋದಾಗ ನಮ್ಮನ್ನು ಯಾರೂ ಗುರುತು ಹಿಡಿಯಬಾರದು." ಎಂದು ಹೇಳಿದುದನ್ನು ವಿನೋದನು ಕೇಳಿದನು.

ಈ ಸ್ವಾಮಿಗಳ ರಹಸ್ಯವು ಬಹು ಸುಲಭವಾಗಿ ವಿನೋದನಿಗೆ ತಿಳಿದು ಹೋಯಿತು. ಸ್ವಾಮಿಗಳು ಹೋಗಬೇಕೆಂದಿರುವ ಊರಿಗೆ ಶಿಷ್ಯರು ಮಾರು ವೇಷದಿಂದ ಮುಂದಾಗಿ ಹೋಗಿ, ಆ ಊರಿನವರ ವಿವರಗಳೆಲ್ಲವನ್ನೂ ಪಟ್ಟಿಬರೆದುಕೊಂಡು ಬರುತ್ತಾರೆ. ತನ್ನ ಜಾತಕದ ವಿವರ ಕೇಳುವವನ ಹೆಸರನ್ನು ಬರೆದುಕೊಂಡು ಸ್ವಾಮಿಗಳು ಒಬ್ಬ ಶಿಷ್ಯನೊಂದಿಗೆ ಒಳಗೆ ಹೋಗಿ, ಅವನ ಸಹಾಯದಿಂದ ಆ ಹೆಸರಿನವನ ವಿವರಗಳನ್ನು, ಪಟ್ಟಿಗಳಿಂದ ಹುಡುಕಿ ಎತ್ತಿ ಬರೆದುಕೊಂಡು ಹೊರಗೆ ಬಂದು ಅದನ್ನು ಓದಿ ಹೇಳಿದಾಗ, ಅವನಿಗೆ ಸ್ವಾಮಿಗಳ ಮೇಲೆ ನಂಬುಗೆ ಬೀಳುತ್ತದೆ. ಆಮೇಲೆ ಬಾಯಿಗೆ ಬಂದ ಹಾಗೆ ಅವನ ಭವಿಷ್ಯತ್ತನ್ನು

ಹೇಳಿ ಕಾಣಿಕೆ ಪಡೆದು ಕಳುಹಿಸುತ್ತಾರೆ. ಅದು ಸುಳ್ಳೆಂಬುದು ಅವನಿಗೆ ಗೊತ್ತಾಗುವಷ್ಟರಲ್ಲಿ ಸ್ವಾಮಿಗಳು ಬೇರೆಲ್ಲಿಗಾದರೂ ಹೋಗಿರುತ್ತಾರೆ. ಒಂದು ವೇಳೆ ಅವರಿರುವಾಗಲೇ ಸುಳ್ಳೆಂದು ಗೊತ್ತಾದರೂ ಅವನು ಸ್ವಾಮಿಗಳ ವಿರುದ್ಧವಾಗಿ ಹೇಳಿ, ಇತರರಿಂದ ನಗುವಿನ ಪಾಲಾಗಲು ಸಿದ್ಧನಾಗಲಾರ. ಹಾಗೆ ಸ್ವಾಮಿಗಳು ಸುಳ್ಳು ಭವಿಷ್ಯ ಹೇಳಿದರೆಂದು ಯಾರೊಡನೆಯಾದರೂ ಹೇಳಿದರೂ ಯಾರೂ ನಂಬರು. ಅವು ಬಾಯಿ ಮಾತುಗಳೇ ಆದುದರಿಂದ ಕೇಳಿಕೊಂಡವನಿಗೆ ಹೊರತು ಬೇರೆಯವರಿಗೆ ನೆನಪಾಗದು.

ಯಾವ ಅಪನಂಬುಗೆಯೂ ಇಲ್ಲದೆ ಗುರು ಶಿಷ್ಯರು ಕುಟೀರದೊಳಗೆ, ನಿಜವಾದ ಸ್ವಾಮಿಗಳು ಕುಡಿಯಬಾರದ ಪಾನೀಯವನ್ನು ಕುಡಿದು ಗಾಢ ನಿದ್ರೆಗೆ ಬಿದ್ದರು. ಸಮಯ ಕಾದುಕೊಂಡಿದ್ದ ವಿನೋದನು ಕುಟೀರದೊಳಗೆ ಪ್ರವೇಶಿಸಿ ಅಲ್ಲಿ ಹುಡುಕುವಾಗ, ಮಾಣಿಕ್ಯಪುರವಾಸಿಗಳ ವಿವರಗಳ ಪಟ್ಟಿಗಳು ಪುಸ್ತಕರೂಪದಲ್ಲಿ ಅವನಿಗೆ ಸಿಕ್ಕಿತು. ಒಂದು ಚೀಲದೊಳಗೆ ಕೃತ್ರಿಮಗಡ್ಡ, ಮೀಸೆಗಳೂ ಸಹ ಸಿಕ್ಕಿದುವು. ವಿನೋದನು ಅವುಗಳನ್ನೆಲ್ಲಾ ತೆಗೆದುಕೊಂಡು ನಿಃಶಬ್ದವಾಗಿ ಹೊರಗೆ ಬಂದು ತನ್ನ ಮನೆ ಸೇರಿಕೊಂಡನು.

ಮರುದಿನ ವಿನೋದನು ಊರವರ ಜತೆಯಲ್ಲಿ ತಾನು ಕೂಡಾ ಸ್ವಾಮಿಗಳ ಕುಟೀರಕ್ಕೆ ಹೋಗಿ ತನ್ನ ಜಾತಕಫಲವನ್ನು ಹೇಳಬೇಕೆಂದು ಕೇಳಿದನು. ಅವನ ಹಾಗೆಯೇ ಕೇಳಿದ ಮತ್ತೆ ಮೂವರ ಹೆಸರುಗಳನ್ನು ಕೂಡಾ ಬರೆದುಕೊಂಡು ಸ್ವಾಮಿಗಳು ಕುಟೀರದೊಳಗೆ ಹೋದರು. ಆತನೊಂದಿಗೆ ಒಳಗೆ ಹೋದ ಶಿಷ್ಯನು, ಒಂದು ನಿಮಿಷದಲ್ಲಿ ಹೊರಗೆ ಬಂದು, "ಸ್ವಾಮಿಗಳಿಗೆ ಸೌಖ್ಯವಿಲ್ಲ. ನಿಮ್ಮ ವಿವರಗಳನ್ನು ನಾಳೆ ಹೇಳುತ್ತಾರೆ. ಈಗ ಹೋಗಿ ನಾಳೆ ಬನ್ನಿ" ಎಂದನು. "ಅಯ್ಯಯ್ಯೋ! ಈಗ ತಾನೇ ಚೆನ್ನಾಗಿದ್ದರಲ್ಲಾ! ನೋಡೋಣ, ಬನ್ನಿ!" ಎಂದು ವಿನೋದನು ಎಲ್ಲರನ್ನೂ ಕರೆದುಕೊಂಡು ಕುಟೀರದೊಳಗೆ ನುಗ್ಗಿದನು.



ಒಮ್ಮೆಗೇ ಒಳಗೆ ಬಂದ ಜನರ ಗುಂಪನ್ನು ನೋಡಿ ಸ್ವಾಮಿಗಳು ಗಾಬರಿಯಾಗಿ, "ಯಾಕೆ ಬಂದಿರಿ? ಹಾಗೇನೂ ಆಗಿಲ್ಲ! ಸ್ವಲ್ಪ ಅಸ್ವಸ್ಥತೆಯಾಗಿದೆ. ವಿಶ್ರಾಂತಿಯಿಂದ ಸರಿಯಾಗುತ್ತೆ. ನಾಳೆ ಬನ್ನಿ. ಹೋಗಿ ಹೋಗಿ" ಎಂದರು ತಡವರಿಸುತ್ತ.

"ನನಗೆ ವೈದ್ಯ ಗೊತ್ತಿದೆ. ನಿಮ್ಮ ಶ್ವಾಸಾ, ನಾಡೀ ಎಲ್ಲಾ ನೋಡಿ ಏನಾಯಿತೋ ಹೇಳಿಬಿಡುತ್ತೇನೆ. ವೈದ್ಯರಿಗೆ ರೋಗ ಬಂದರೆ ಇನ್ನೊಬ್ಬರು ವೈದ್ಯರೇ ಬೇಕಲ್ಲವೇ? ಹಾಗೆಯೇ ನಿಮ್ಮ ಜಾತಕ ಫಲ ಹೇಳ ಲಿಕ್ಕೂ ಇನ್ನೊಬ್ಬರೇ ಬೇಕು. ನಿಮ್ಮ ಭೂತ ಭವಿಷ್ಯ ವರ್ತಮಾನವೆಲ್ಲಾ ನಾನೇ ಹೇಳಿಬಿಡುತ್ತೇನೆ ಮಹಾ ಗುರುಗಳೇ!" ಎಂದು ವಿನೋದನು ಹೇಳಿದನು. ಅವನ ಅಧಿಕಪ್ರಸಂಗತನವನ್ನು ನೋಡಿ ಸ್ವಾಮಿಗಳು ಶಾಪ ಕೊಡುವರೇನೋ ಎಂದು ಕೆಲವರು ಹೆದರಿ ದರು. ಆದರೆ ಸ್ವಾಮಿಗಳಿಗೂ ಶಿಷ್ಯರಿಗೂ ತಲೆ ಯಿಂದಲೇ ಪ್ರಾಣ ಹೋಗುವ ಹಾಗೆ ಆಯಿತು.

"ನಿಮ್ಮ ಬದಲಿಗೆ ನಾನೇ ಎಲ್ಲರ ಜಾತಕ ಹೇಳು ತ್ತೇನೆ" ಎಂದು ವಿನೋದನು ಮುಚ್ಚಿಟ್ಟುಕೊಂಡಿದ್ದ ಪುಸ್ತಕ ರೂಪದ ಪಟ್ಟಿಯನ್ನು ಬಿಡಿಸಿ ಎಲ್ಲರ ಹೆಸರು ವಿವರಗಳನ್ನೂ ಓದಿ ಹೇಳಲು ತೊಡಗಿದನು. ಎಲ್ಲರೂ ಬೆರಗಾಗಿ ಕೇಳತೊಡಗಿದರು. ಯಾರಿಗೂ ಅದರ ತಲೆಬುಡ ಗೊತ್ತಾಗಲಿಲ್ಲ. ಅದನ್ನು ತಿಳಿದು ವಿನೋದನು ಆ ಪಟ್ಟಿ ಪುಸ್ತಕದಲ್ಲಿರುವ ಊರವರ ಹೆಸರು ಪೂರ್ವೋತ್ತರಗಳನ್ನು ವಿಶದವಾಗಿ ತಿಳಿಸಿ ದನು. ಕೆಲವರು ತಮ್ಮ ವಿಷಯ ಆ ಪುಸ್ತಕದಲ್ಲಿರುವು ದನ್ನು ಸ್ವಯಂ ಓದಿ ನಿಜವನ್ನು ಗ್ರಹಿಸಿ ಸ್ವಾಮಿ ಗಳನ್ನು ತಿರಸ್ಕಾರದಿಂದ ನೋಡಿದರು.

ಅಷ್ಟಕ್ಕೆ ಬಿಡದೆ ವಿನೋದನು ಕೃತ್ರಿಮ ಗಡ್ಡ ಮೀಸೆ ಮೊದಲಾದ ವೇಷ ಬದಲಾವಣೆಯ ಸಾಧನ ಗಳನ್ನೂ ತೆಗೆದು ಎಲ್ಲರಿಗೂ ತೋರಿಸುತ್ತ ಸ್ವಾಮಿ ಗಳಿಗೂ ಶಿಷ್ಯರಿಗೂ ಮಂಗಳಾರತಿ ಮಾಡಿದನು.

ಜನರು ಆ ಶಿಷ್ಯರನ್ನೂ ಆ ಗಡ್ಡ ಮೀಸೆಗಳನ್ನೂ ಹೋಲಿಸಿಕೊಳ್ಳುತ್ತ, "ಹೌದಲ್ಲ. ಒಂದು ತಿಂಗಳ ಹಿಂದೆ ನಮ್ಮೂರಿಗೆ ಬಂದು ತಿರುಗಾಡಿಕೊಂಡಿದ್ದವರು ಇವರೇ. ಏನೋ ಸಾಧುಗಳ ಹಾಗೆ ಭಿಕ್ಷೆಗೆ ಬರುತ್ತಾ ಅವರಿವರ ಹೆಸರುಗಳನ್ನು ಕೇಳುತ್ತಾ ಇದ್ದರು. ಗಡ್ಡ ಮೀಸೆಗಳಿಲ್ಲದ್ದರಿಂದ ಈಗ ಇವರ ಗುರುತೇ ತಿಳಿ ಯುವದಿಲ್ಲ." ಎಂದರು.

ನಾಲ್ಕೇಟು ಬಾರಿಸಿದ ಮೇಲೆ ಸ್ವಾಮಿಗಳೂ ಶಿಷ್ಯರೂ ನಿಜವನ್ನು ಒಪ್ಪಿಕೊಂಡರು. ಮಿತಿಮೀರಿದ ಜಾತಕಗಳ ಹುಚ್ಚು ತಮ್ಮನ್ನು ಹೇಗೆ ಮೂರ್ಖ ರನ್ನಾಗಿ ಮಾಡಿತೆಂದು ಎಲ್ಲರಿಗೂ ಗೊತ್ತಾಯಿತು. ಆ ಸ್ವಾಮಿ ಶಿಷ್ಯರನ್ನು ಸುತ್ತುಮುತ್ತಲಿನ ಗ್ರಾಮ ಗಳಿಂದಲೇ ಓಡಿಸಿಬಿಟ್ಟರು.



# ಕುರೂಪಿ

ಒಬ್ಬ ವ್ಯಾಪಾರಿಗೆ ಕುರೂಪಿಯಾದ ಮಗಳಿದ್ದಳು. ಆವಳಿಗೆ ಮದುವೆಯ ವಯಸ್ಸು ಬಂದ ಮೇಲೆ ವ್ಯಾಪಾರಿ ಎಷ್ಟೋ ಸಂಬಂಧಗಳನ್ನು ನೋಡಿದನು. ಯಾರೂ ಅವಳನ್ನು ಮದುವೆಯಾಗಲು ಮುಂದೆ ಬರಲಿಲ್ಲ. ಆಳಿಯನಿಗೆ ಹಣವನ್ನೂ ಮನೆಯನ್ನೂ ಕೊಡುವುದಾಗಿ ಹೇಳಿದರೂ ಕೆಲಸ ನಡೆಯಲಿಲ್ಲ.

ಕಡೆಗೆ ಆ ವ್ಯಾಪಾರಿ ತನ್ನ ಬಂಧುವರ್ಗದಲ್ಲಿದ್ದ ಒಬ್ಬ ಕುರುಡನಾದ ಯುವಕನಿಗೆ ಮಗಳನ್ನು ಕೊಟ್ಟು ಮದುವೆ ಮಾಡಿದನು.

ಸ್ವಲ್ಪ ಕಾಲ ಕಳೆದ ಮೇಲೆ ಆ ಊರಿಗೆ ಒಬ್ಬ ದೊಡ್ಡ ನೇತ್ರ ವೈದ್ಯನು ಬಂದನು. ಅವನು ಶಸ್ತ್ರ ಚಿಕಿತ್ಸೆ ಮಾಡಿ ಅನೇಕಮಂದಿ ಕುರುಡರಿಗೆ ದೃಷ್ಟಿ ಬರುವ ಹಾಗೆ ಮಾಡುತ್ತಿದ್ದನು.

ಬಂಧುಗಳು ವ್ಯಾಪಾರಿಯೊಂದಿಗೆ, "ಒಳ್ಳೆಯ ಅವಕಾಶ ಬಂದಿದೆಯಲ್ಲಾ. ನಿಮ್ಮ ಆಳಿಯನಿಗೆ ಕಣ್ಣು ಬರಿಸಿಬಿಡಿರಿ" ಎಂದರು.

ವ್ಯಾಪಾರಿ ಸಾಧ್ಯವಿಲ್ಲವೆಂಬಂತೆ ತಲೆಯಾಡಿಸುತ್ತ, "ಸುಖವಾಗಿ ಸಾಗುವ ನನ್ನ ಮಗಳ ಸಂಸಾರವನ್ನು ಕೈಯಾರೆ ಹಾಳು ಗೆಡಹಲಾರೆ. ಕಣ್ಣು ಬಂದರೆ ಆಳಿಯನು ಮಗಳ ಮುಖವನ್ನು ನೋಡುತ್ತಾನೆಯೇ? ಕುರೂಪಿ ಹೆಂಡತಿಗೆ ಕುರುಡು ಗಂಡನೇ ಜತೆ!" ಎಂದನು.





# ವಿವಾಹಸಮಸ್ಯೆ

**ಪೂ**ರ್ವಕಾಲದಲ್ಲಿದ್ದ ವೈಶಾಲೀ ನಗರದ ರಾಜನಾದ ಪ್ರತಾಪರುದ್ರನಿಗೆ ಸೂರ್ಯಕುಮಾರಿ ಎಂಬವಳೊಬ್ಬಳೇ ಮಗಳು. ಬೇರೆ ಸಂತಾನವಿಲ್ಲದುದರಿಂದ, ಮಗಳನ್ನೇ ಮಗನೆಂದೂ ಭಾವಿಸಿ ಅವಳ ವಿದ್ಯಾಭ್ಯಾಸದ ಜತೆಯಲ್ಲಿ ಯುದ್ಧ ವಿದ್ಯೆಗಳನ್ನು ಕೂಡಾ ಕಲಿಸಿ ಕೊಟ್ಟಿದ್ದನು.

ಅವಳು ಶ್ರದ್ಧೆವಹಿಸಿ ಎಲ್ಲಾ ಬಗೆಯ ಯುದ್ಧ ವಿಧಾನಗಳಲ್ಲಿಯೂ ಅಸಾಧಾರಣವಾದ ಪ್ರಜ್ಞೆಯನ್ನು ಪಡೆದಿದ್ದಳು. ಎಲ್ಲಾ ವಿಧದ ಯುದ್ಧ ತಂತ್ರಗಳನ್ನೂ ಅರಿತ ನಿಪುಣೆಯಾಗಿದ್ದಳು.

ಅವಳಿಗೆ ಮದುವೆಮಾಡಬೇಕಾದ ವಯಸ್ಸು ಬಂದುದರಿಂದ, ತನ್ನ ಅನಂತರ ರಾಜ್ಯಪಾಲನೆ ಮಾಡಬೇಕಾಗಿದ್ದ ಕುಮಾರಿಗೆ ಎಂತಹ ಗಂಡನನ್ನು ಆರಿಸುವುದೆಂಬ ವಿಷಯದಲ್ಲಿ ತುಂಬಾ ಯೋಚನೆ ಹಿಡಿಯಿತು. ಅಳಿಯನಾಗುವವನೂ ರಾಜ್ಯಪಾಲನೆ ಮಾಡುವ ಸಾಮರ್ಥ್ಯ ಉಳ್ಳವನಾಗಿರಬೇಕು. ಅವನು ಯುದ್ಧ ನೈಪುಣ್ಯತೆಗಳಲ್ಲಿ ಸೂರ್ಯಕುಮಾರಿಯನ್ನು ಮೀರಿಸುವವನಾಗಿದ್ದರೆ, ಸುತ್ತುಮುತ್ತಲಿನ ದೇಶದ ರಾಜರಲ್ಲಿ ವೈಶಾಲೀ ನಗರವನ್ನು ಒಬ್ಬಳು ಹೆಣ್ಣು ಮಗಳು ಪಾಲಿಸುತ್ತಾಳೆಂಬ ಕೇವಲ ಭಾವವು ಬರಲಾರದು. ಅಳಿಯನು ಅದಕ್ಕೆ ತಕ್ಕಂತಿರಬೇಕು.

ಇದನ್ನೆಲ್ಲ ಆಲೋಚನೆ ಮಾಡಿಕೊಂಡು ಪ್ರತಾಪರುದ್ರನು, ಯುದ್ಧ ವಿದ್ಯೆಗಳಲ್ಲಿ ತನ್ನ ಮಗಳನ್ನು ಸೋಲಿಸಬಲ್ಲ ವರನಿಗೇ ಅವಳನ್ನು ಕೊಟ್ಟು ಮದುವೆ ಮಾಡುವೆನೆಂದು ಎಲ್ಲಾ ದೇಶಗಳಿಗೂ ವರ್ತಮಾನ ಕಳುಹಿಸಿದನು.

ಗೊತ್ತು ಮಾಡಲ್ಪಟ್ಟ ದಿನಕ್ಕೆ ಸರಿಯಾಗಿ ಅನೇಕ ಮಂದಿ ರಾಜರೂ ರಾಜಕುಮಾರರೂ ವೈಶಾಲೀ ನಗರಕ್ಕೆ ಬಂದು ಸೇರಿದರು. ಹಾಗೇ ಸ್ವಯಂವರದ ಸ್ಪರ್ಧೆಯಲ್ಲಿ ಭಾಗ ವಹಿಸಲು ಬಂದವರಲ್ಲಿ ಇಬ್ಬರು ಬೇಡ ಯುವಕರೂ ಇದ್ದರು.

ಅವರನ್ನು ನೋಡಿ ಪ್ರತಾಪರುದ್ರನಿಗೆ ಆಶ್ಚರ್ಯವೂ ಚಿಂತೆಯೂ ಕವಿಯಿತು. ತನ್ನ ಕುಮಾರಿಯನ್ನು ರಾಜವಂಶದವರೊಂದಿಗೆ ಸ್ಪರ್ಧಿಸಲು ಬಿಡಬೇಕೆಂಬ ಆಲೋಚನೆಯನ್ನು ಮಾಡಿ, ಅಂಥವರೇ ಬರುವರೆಂದು ನಂಬಿದರೆ, ಬೇಡ ಜಾತಿಯ ಯುವಕರೂ ಬಂದಿದ್ದಾರಲ್ಲ! ಬೇರೆ ಜಾತಿಯ ಯುವಕರು ಸ್ಪರ್ಧೆಗೆ ಬರಬಾರದೆಂದು ಅವನು ನಿಯಮವಿಟ್ಟಿರ

ರಾಂಬಾಬು

ಲಿಲ್ಲ. ಈಗ ಈ ಬೇಡ ಜಾತಿಯವರನ್ನು ತನ್ನ ಕುಮಾರಿಯೊಂದಿಗೆ ಸ್ಪರ್ಧಿಸಲು ಬಿಡಬಾರದೆಂದು ಬಹಿರಂಗವಾಗಿ ಹೇಳಿದರೆ ಸರಿಯಾಗಲಾರದು. ಅವನು ಆಲೋಚನೆ ಮಾಡಿಕೊಂಡಿದ್ದನು. ಅವರಿಬ್ಬರಿಗೆ ಕುಮಾರಿಯೊಂದಿಗೆ ಸ್ಪರ್ಧಿಸುವ ಅವಕಾಶ ಬಾರದಂತೆ ನೋಡಿಕೊಂಡರಾಯಿತೆಂದುಕೊಂಡನು.

ಆದರೆ ಪ್ರತಾಪರುದ್ರನ ಆಲೋಚನೆಯಂತೆ ನಡೆಯಲಿಲ್ಲ. ಕಾರಣವೇನಂದರೆ ಸ್ವಯಂವರದ ಸ್ಪರ್ಧೆಗೆ ಬಂದ ರಾಜರೂ, ರಾಜಕುಮಾರರೂ ಸೂರ್ಯಕುಮಾರಿಯೊಂದಿಗೆ ಎಲ್ಲಾ ಬಗೆಯ ಯುದ್ಧ ವಿಧಾನಗಳಲ್ಲಿಯೂ ಸ್ಪರ್ಧಿಸಿ ಎಲ್ಲದರಲ್ಲಿಯೂ ಸೋತುಹೋದರು. ಹಾಗಾಗಿ ಕಡೆಗೆ ವೀರಮಲ್ಲ, ನಾಗಮಲ್ಲರೆಂಬ ಉಳಿದ ಆ ಬೇಡ ಯುವಕರನ್ನು ಸ್ಪರ್ಧೆಗೆ ಬಿಡದಿರಲು ಸಾಧ್ಯವಾಗಲಿಲ್ಲ.

"ಇವರನ್ನು ನಿನ್ನ ಪೂರ್ತಿ ಸಾಮರ್ಥ್ಯದಿಂದ ಸೋಲಿಸಿಬಿಡಮ್ಮ" ಎಂದು ಪ್ರತಾಪರುದ್ರನು ತನ್ನ ಕುಮಾರಿಗೆ ರಹಸ್ಯವಾಗಿ ಎಚ್ಚರಿಸಿದನು. ಅವನ ಎಚ್ಚರಿಕೆಯೂ ಪ್ರಯೋಜನವಾಗಲಿಲ್ಲ.

ವೀರಮಲ್ಲನೆಂಬ ಬೇಡ ಯುವಕನು ಎಲ್ಲಾ ಬಗೆಯ ಯುದ್ಧ ವಿದ್ಯೆಗಳಲ್ಲಿಯೂ ಸೂರ್ಯಕುಮಾರಿಯನ್ನು ಸೋಲಿಸಿಬಿಟ್ಟನು. ಇನ್ನು ಈ ವೀರಮಲ್ಲನಿಗೆ ತನ್ನ ಕುಮಾರಿಯನ್ನು ಕೊಡದೆ ತಪ್ಪಿಸಲು ದಾರಿ ಏನೆಂದು ಪ್ರತಾಪರುದ್ರನು ತನ್ನೊಳಗೆ ಮಥನ ಮಾಡಿಕೊಂಡಿರುವಾಗ, "ಮುಗಿಯಿತಲ್ಲ ಸ್ಪರ್ಧೆ? ಇನ್ನು ವಿವಾಹ ನಡೆಸಿಬಿಡಿ" ಎಂದು ವೀರಮಲ್ಲನು ಅವಸರಪಡಿಸ ತೊಡಗಿದನು.

ಆಗ ನಾಗಮಲ್ಲನು ಮುಂದೆ ಬಂದು, "ಮಹಾರಾಜರೇ, ಸ್ಪರ್ಧೆಗೆ ಬಂದವರಲ್ಲಿ ನಾನೊಬ್ಬನು ಇನ್ನೂ ಉಳಿದಿದ್ದೇನೆ. ನನಗೆ ಅವಕಾಶವಿಲ್ಲದಂತೆ ಮಾಡಿ, ರಾಜಕುಮಾರಿಗೆ ಹೇಗೆ ಮದುವೆಮಾಡುವಿರಿ?" ಎಂದು ಆಕ್ಷೇಪ ತೆಗೆದನು.



ಗೆದ್ದ ಒಬ್ಬನೊಂದಿಗೇ ಮದುವೆ ನಡೆಯುವುದಲ್ಲದೆ, ಅನೇಕರು ಗೆದ್ದರೆ ಒಬ್ಬಳನ್ನು ಕೊಟ್ಟು ಮದುವೆ ಮಾಡುವುದು ಹೇಗೆಂದು ಪ್ರತಾಪರುದ್ರನು ಕೇಳಲಿಲ್ಲ. ಬೇಡ ಜಾತಿಯವರನು ಹೇಗಾದರೂ ತಪ್ಪಿದರೆ ಸಾಕೆಂಬ ಅವಸರದಲ್ಲಿ, "ಹೌದು, ನಿನ್ನ ಮಾತು ನಿಜವೇ. ನೀನೂ ವೀರಮಲ್ಲನೂ ಯುದ್ಧ ಮಾಡಿರಿ. ಯಾರು ಗೆಲ್ಲುವಿರೋ ನೋಡೋಣ" ಎಂದನು. ಇಬ್ಬರು ಬೇಡ ಯುವಕರು ಕಲೆ ಬಿದ್ದು ನಾಗಮಲ್ಲನು ಗೆದ್ದುಬಿಟ್ಟರೆ ವೀರಮಲ್ಲನ ತಂಟೆ ಬಿಟ್ಟು ಹೋಗುವುದೆಂದೂ, ಆ ಮೇಲೆ ನಾಗಮಲ್ಲನನ್ನು ತಪ್ಪಿಸಲು ಏನಾದರೂ ಉಪಾಯಮಾಡಬಹುದೆಂದೂ, "ನೀನು ಸೋಲಿಸಿದ್ದು ರಾಜಕುಮಾರಿಯನ್ನಲ್ಲ. ಆದ್ದರಿಂದ ನಿನಗೆ ಕುಮಾರಿ ದಕ್ಕಲಾರಳು" ಎನ್ನಬಹುದೆಂದೂ ರಾಜನು ಅಂದುಕೊಂಡಿದ್ದನು.

ಆದರೆ ವೀರಮಲ್ಲನು, "ಆದಾಗದು. ನಾನು ರಾಜಕುಮಾರಿಯೊಂದಿಗೆ ಸ್ಪರ್ಧಿಸಿ ಅವಳನ್ನು ಮದುವೆ

ಯಾಗಲು ಬಂದೆನೇ ಹೊರತು ಸ್ಪರ್ಧೆಗೆ ಬಂದವರೊಂದಿಗೆ ಹಗೆಯನ್ನು ಹುಟ್ಟಿಸಿಕೊಳ್ಳಲು ಬಂದಿಲ್ಲ" ಎಂದುಬಿಟ್ಟನು.

ಅವನ ವಾದನೆಯನ್ನು ಎಲ್ಲರೂ ಒಪ್ಪಿದುದರಿಂದ, ರಾಜನು ತನ್ನ ಕುಮಾರಿಯನ್ನು ನಾಗಮಲ್ಲನೊಂದಿಗೆ ಸ್ಪರ್ಧಿಸಲು ಬಿಡಬೇಕಾಯಿತು. ಆ ಸ್ಪರ್ಧೆಯಲ್ಲಿ ಸೂರ್ಯಕುಮಾರಿ ನಾಗಮಲ್ಲನ ಕೈಯಲ್ಲಿ ಕೂಡಾ ಸೋತುಹೋದಳು!

ಈಗ ಪ್ರತಾಪರುದ್ರನು ನೆಮ್ಮದಿಗೊಂಡವನಂತೆ, ತನ್ನ ಕುಮಾರಿ ಇಬ್ಬರನ್ನು ಮದುವೆಯಾಗಲು ಸಾಧ್ಯವಿಲ್ಲದುದರಿಂದ, ಈ ಸ್ಪರ್ಧೆಯ ಫಲಿತ ರದ್ದಾಯಿತೆಂದು ಹೇಳಿದನು.

ಅವನ ಮಾತನ್ನು ಉಳಿದ ಸ್ಪರ್ಧೆಗಾಳರು ಒಪ್ಪಲಿಲ್ಲ. "ನಾವೆಲ್ಲಾ ಕೈಲಾದರೆ ರಾಜಕುಮಾರಿಯನ್ನು ಮದುವೆಯಾಗಲಿಕ್ಕೂ, ಇಲ್ಲದಿದ್ದರೆ ಅವಳ ಮದುವೆಯನ್ನು ನೋಡಲಿಕ್ಕೂ ಬಂದೆವೇ ಹೊರತು, ಸುಮ್ಮನೆ ಹಿಂದಿರುಗಿ ಹೋಗಲು ಬರಲಿಲ್ಲ. ತನ್ನನ್ನು ಸೋಲಿಸಿದ ಇಬ್ಬರಲ್ಲಿ ಒಬ್ಬನನ್ನು ಅವಳು ಸ್ವಯಂವರ ಪದ್ಧತಿಯಲ್ಲಿ ವರಿಸಲಿ. ಅದುವೇ ಸರಿಯಾದ ನ್ಯಾಯ" ಎಂದರು ಎಲ್ಲರೂ.

"ರಾಜಕುಮಾರಿಯ ಮದುವೆಯ ನಿರ್ಣಯವು ನಾಳೆ ದರಬಾರಿನಲ್ಲಿ ನಿಶ್ಚಯಿಸಲ್ಪಡುತ್ತದೆ. ನಾಳೆಯ ದರಬಾರಿಗೆ ಎಲ್ಲರೂ ಬನ್ನಿರಿ" ಎಂದು ಹೇಳಿ ಪ್ರತಾಪರುದ್ರ ರಾಜನು ಅಂದು ತಪ್ಪಿಸಿಕೊಂಡನು.

ಆ ರಾತ್ರಿ ವೀರಮಲ್ಲನು ರಹಸ್ಯವಾಗಿ ಪ್ರತಾಪರುದ್ರನನ್ನು ಸಂಧಿಸಿ, "ಮಹಾರಾಜರೆ, ನಾನು ಕುಂತಲ ದೇಶದ ರಾಜಾ ಕೇತುವರ್ಮರ ಕುಮಾರ ಜಯಸಿಂಹ. ಸೂರ್ಯಕುಮಾರಿಗೆ ಮಂತ್ರಶಕ್ತಿಗಳಿವೆಯೆಂದೂ ಸಾಧಾರಣ ಯುದ್ಧ ವೀರರು ಅವಳನ್ನು ಜಯಿಸಲು ಸಾಧ್ಯವಿಲ್ಲವೆಂದೂ, ರಾಜಕುಮಾರನಾಗಿ ಅವಳ ಕೈಯಲ್ಲಿ ಸೋತರೆ ನನಗೂ ನನ್ನ ತಂದೆಗೂ ದೇಶಕ್ಕೂ ಅವಮಾನವೆಂದೂ ತಿಳಿದು ನಾನು ಬೇಡನ ವೇಷದಲ್ಲಿ ಬಂದವನು. ನಾಗಮಲ್ಲನು ನಿಜಕ್ಕೂ ಬೇಡರವನೇ. ಅವನ ತಂದೆ ಬೇಡರ ನಾಯಕ. ಆದ್ದರಿಂದ ನಾಳೆ ನಿಮ್ಮ ಮಗಳಿಂದ ನನ್ನ ಕೊರಳಿಗೇ ಮಾಲೆ ಹಾಕಿಸಿದರೆ, ನಿಮಗೂ ನಿಮ್ಮ ವಂಶಕ್ಕೂ ಅಪಖ್ಯಾತಿ ತಪ್ಪುತ್ತದೆ. ಇದನ್ನು ತಿಳಿಸಲೆಂದೇ ಬಂದೆನು" ಎಂದು ಹೇಳಿ ಹೊರಟು ಹೋದನು.

ತನ್ನೊಂದಿಗೆ ಸ್ಪರ್ಧಿಸಿ ಸೋಲಲು ನಾಚಿಕೊಂಡು, ತನ್ನ ವಂಶವನ್ನು ಬಚ್ಚಿಟ್ಟುಕೊಂಡವನ ಕೊರಳಿಗೆ ಮಾಲೆ ಹಾಕಲು, ವೀರಳಾದ ಸೂರ್ಯಕುಮಾರಿ ಇಷ್ಟಪಡಲಿಲ್ಲ. ಮರುದಿನ ರಾಜಸಭೆಯಲ್ಲಿ ಅವಳು ಪ್ರತಾಪರುದ್ರನಿಗೆ ಆಶ್ಚರ್ಯವಾಗುವಂತೆ ನಾಗಮಲ್ಲನ ಕೊರಳಿಗೇ ಮಾಲೆ ಹಾಕಿ ಮದುವೆಮಾಡಿಕೊಂಡಳು.



# ಯೋಗ್ಯತೆ?

ಒಬ್ಬ ರಾಜನು ಗ್ರಾಮಗಳಲ್ಲಿ ವೈದ್ಯರನ್ನು ಏರ್ಪಡಿಸಲು ಒಂದು ಕ್ರಮವಿಡಿಸಿದನು. ವೈದ್ಯ ಕಲಿತವರು ತಮ್ಮ ಗುರುಗಳಿಂದ ಯೋಗ್ಯತಾ ಪತ್ರವನ್ನು ತಂದರೆ ಅವರನ್ನು ಒಳ್ಳೆಯ ಸಂಬಳದ ಮೇಲೆ ಗ್ರಾಮಗಳಲ್ಲಿ ವೈದ್ಯಾಧಿಕಾರಿಯಾಗಿ ನಿಯಮಿಸುವುದಾಗಿ ಪ್ರಕಟಿಸಿದನು.

ಅದನ್ನು ತಿಳಿದು ಉದ್ರೇಕನೆಂಬವನು ವೈದ್ಯ ಗುರುವಿನ ಬಳಿಗೆ ಹೋಗಿ, ತನಗೆ ಯೋಗ್ಯತಾ ಪತ್ರ ಕೊಡುವಂತೆ ಕೇಳಿದನು. ತನ್ನ ಶಿಷ್ಯರಿಗೆ ಹೊರತು ಬೇರೆಯವರಿಗೆ ಅಂತಹ ಪತ್ರ ಕೊಡಲಾರೆನೆಂದು ವೈದ್ಯನು ಹೇಳಿದನು. ಉದ್ರೇಕನು ಕತ್ತಿ ತೋರಿಸಿ, ಯೋಗ್ಯತಾ ಪತ್ರ ಕೊಡದಿದ್ದರೆ ಕೊಂದುಬಿಡುವುದಾಗಿ ಬೆದರಿಸಿದನು.

ವೈದ್ಯಗುರು ಉಪಾಯವಿಲ್ಲದೆ, "ಉದ್ರೇಕನೆಂಬ ಇವನು ಅನೇಕವರ್ಷಗಳಿಂದ ನನ್ನ ಹತ್ತಿರ ಶಿಷ್ಯನಾಗಿದ್ದು ವೈದ್ಯ ಕಲಿತಿದ್ಧಾನೆ" ಎಂದು ಪತ್ರ ಬರೆದು ಕೊಟ್ಟನು.

ಅದನ್ನು ನೋಡಿ ರಾಜನು, "ನೀನು ಮಂದಮತಿಯಾಗಿರುವೆ. ಎರಡು ಮೂರು ವರ್ಷಗಳಲ್ಲಿ ಎಲ್ಲರೂ ವೈದ್ಯ ವಿದ್ಯೆ ಕಲಿತು ಮುಗಿಸಿದರೆ, ನೀನು ಅನೇಕ ವರ್ಷ ಏಕೆ ಕಲಿಯಬೇಕಾಗಿ ಬಂತು? ನಿನಗೆ ಉದ್ಯೋಗ ಕೊಡಲು ಸಾಧ್ಯವಿಲ್ಲ" ಎಂದು ನಿರಾಕರಿಸಿಬಿಟ್ಟನು.





# ಪುಕಾರು

**ಒಂದು** ಊರಿನಲ್ಲಿ ಸೂರಪ್ಪನೆಂಬವನು ಎಲ್ಲರಿಗೂ ತಿಳಿದವನಾಗಿದ್ದ. ಕಾರಣವೇನಂದರೆ ಎಲ್ಲಿಯಾದರೂ ಏನಾದರೂ ಮುಖ್ಯ ವಿಶೇಷವಿದ್ದರೆ, ಅದನ್ನು ತಾನೇ ಮುಂದಾಗಿ ತಿಳಿದುಕೊಂಡು, ಎಲ್ಲರಿಗೂ ಮುಂದಾಗಿ ಹೇಳಬೇಕೆಂಬ ಕುತೂಹಲ ಸೂರಪ್ಪನಿಗಿತ್ತು. ಈ ಕುತೂಹಲದ ಅತಿರೇಕದಲ್ಲಿ ಅವಸರಪಟ್ಟು ಅವನು ಅನೇಕಬಾರಿ ತಪ್ಪು ಸಮಾಚಾರವನ್ನು ಪ್ರಚಾರ ಮಾಡಿಬಿಡುತ್ತಿದ್ದನು. ಆದುದರಿಂದ ಅವನು ಹೇಳಿದ ಸುದ್ದಿಗಳನ್ನು ಯಾರೂ ನಂಬುತ್ತಿರಲೂ ಇಲ್ಲ. ತನ್ನ ಮಾತನ್ನು ಜನರು ನಂಬುವುದಿಲ್ಲವೆಂದು ತಿಳಿದಾಗ ಸೂರಪ್ಪನಿಗೆ ಬಹಳ ಸಂಕಟವಾಗುತ್ತಿತ್ತು. ಆದುದರಿಂದ ತನ್ನ ಮೇಲೆ ಜನರಿಗಿರುವ ದುರಭಿಪ್ರಾಯವನ್ನು ಹೋಗಲಾಡಿಸಬೇಕೆಂದು ಬಹಳ ಪ್ರಯತ್ನ ಮಾಡುತ್ತಿದ್ದನು. ಹಾಗೆಂದು ತನಗೆ ತಿಳಿದ ಸುದ್ದಿಯನ್ನು ಯಾರಿಗಾದರೂ ಹೇಳದಿದ್ದರೆ ಅವನ ಹೊಟ್ಟೆ ತೊಳಸುತ್ತಿತ್ತು.

ಒಂದು ದಿನ ಆ ಊರಿನಲ್ಲಿ ಏನೋ ಒಂದು ಗಲಾಟೆ ನಡೆಯಿತು. ಆ ಗಲಾಟೆಯನ್ನು ಪರಿಷ್ಕಾರ ಮಾಡಲಿಕ್ಕೆ ಪಕ್ಕದ ಊರಿನ ಪಟೇಲ ಪಟ್ಟಾಭಿರಾಮರೇ ಬರಬೇಕಾಗಿತ್ತು. ಅವರು ಬರುತ್ತೇನೆಂದ ಹೊತ್ತಿಗೆ ಬರಲಿಲ್ಲ. ಬೆಳಿಗ್ಗೆ ಜನರು ಒಂದು ಕಡೆಯಲ್ಲಿ ಕೂಡಿ ಅವರ ದಾರಿಯನ್ನು ಕಾಯುತ್ತಿದ್ದರು. ಏನಾಯಿತೋ ಏನೋ, ಅವರು ಎಷ್ಟು ಹೊತ್ತಾದರೂ ಬರಲೇ ಇಲ್ಲ. ಕಡೆಗೆ ಎರಡು ಪಕ್ಷಗಳವರೂ ತಮ್ಮ ತಮ್ಮ ಮನೆಗಳಿಗೆ ಹೊರಟು ಹೋದರು.

ನೆರೆಯೂರಿನ ಪಟೇಲ ಪಟ್ಟಾಭಿರಾಮರೆಂದರೆ ಮಾತು ತಪ್ಪುವವರಲ್ಲ. ಅವರು ಬಾರದೇ ಹೋಗಲು ಏನೋ ದೊಡ್ಡ ಕಾರಣವೇ ಇರಬೇಕು, ಎಂದು ಕೆಲವರು ಮಾತಾಡಿಕೊಂಡುದನ್ನು ಸೂರಪ್ಪನು ಕೇಳಿದನು. ಆ ಕಾರಣವನ್ನು ಎಲ್ಲರಿಗಿಂತ ಮೊದಲು ತಾನೇ ತಿಳಿದುಕೊಂಡು ಎಲ್ಲರಿಗೂ ಹೇಳಬೇಕೆಂದು ಸೂರಪ್ಪನಿಗೆ ತೋರಿತು. ಅವನು ಪಟ್ಟಾಭಿರಾಮರನ್ನು ಸಮೀಪದಲ್ಲಿ ನೋಡಿರಲಿಲ್ಲ. ಒಂದೆರಡು ಬಾರಿ ದೂರದಲ್ಲಿ ನೋಡಿದ್ದುಂಟು.

ಸೂರಪ್ಪನು ತನ್ನ ಕುತೂಹಲವನ್ನು ಹತ್ತಿಕ್ಕಿಕೊಳ್ಳಲಾರದೆ, ಉರಿಬಿಸಿಲನ್ನೂ ಲಕ್ಷ್ಯಮಾಡದೆ ನೆರೆಯ ಊರಿಗೆ ಹೊರಟನು. ಆ ಊರಿನ ಹೊರ

ಜಿ. ರಾಮಲಕ್ಷ್ಮಿ

ಭಾಗವನ್ನು ತಲಪುವಾಗ ಒಂದು ಶವದ ಮರೆವಣಿಗೆ ಅವನಿಗಿದಿರಾಗಿ ಬಂತು. ಸೂರಪ್ಪನು ತನಗಿದಿರಾದ ಒಬ್ಬನ ಹತ್ತಿರ "ಯಾರೋ ದೊಡ್ಡ ಮನುಷ್ಯರು ತೀರಿ ಹೋದ ಹಾಗಿದೆಯಲ್ಲಾ? ದೊಡ್ಡವರೆಲ್ಲ ಸೇರಿದ್ದಾರೆ. ಯಾರು ತೀರಿ ಹೋದರು?" ಎಂದು ಕೇಳಿದನು.

"ಹೌದು. ಈ ಊರಿನ ದೊಡ್ಡ ಮನುಷ್ಯರೇ. ಎಲ್ಲರಿಗೂ ಬೇಕಾದವರು, ಹೋದರು!" ಎಂದ ಆ ದಾರೀಕಾರ.

"ಪಟ್ಟಾಭಿರಾಮರಿಗಿಂತ ದೊಡ್ಡವರು ಈ ಊರಿನಲ್ಲಿ ಯಾರಿದ್ದಾರೆ?" ಎಂದು ಸೂರಪ್ಪ ಮತ್ತೆ ಅವನನ್ನು ಕೇಳಿದ.

"ಹೌದು ಹೌದು. ಪಟ್ಟಾಭಿರಾಮರಿಗಿಂತ ದೊಡ್ಡವರು ಯಾರಿದ್ದಾರೆ? ಯಾವ ಕಾರ್ಯವಾದರೂ ಅವರಿಲ್ಲದೆ ಆಗುತ್ತೆಯೆ?" ಎಂದು ಆ ಮನುಷ್ಯ ಬೇಗ ಬೇಗನೆ ಹೊರಟು ಹೋದನು.

ಸೂರಪ್ಪನಿಗೆ ಎಲ್ಲವೂ ಅರ್ಥವಾಗಿಹೋಯಿತು. ಪಾಪ, ಆ ಊರಿನ ಪಟೇಲರು ಹೋದರು. ಅದಕ್ಕೇ ಅವರು ಈ ದಿನ ಬೆಳಿಗ್ಗೆ ಗಲಾಟೆಗಾರರೊಳಗೆ ರಾಜೀ ಮಾಡಿಸಲು ಬರಲಿಲ್ಲ!

ಹೀಗೆಂದುಕೊಂಡು ಸೂರಪ್ಪನು ಈ ಅಪೂರ್ವ ಸಮಾಚಾರವನ್ನು ತನ್ನ ಊರಿನವರಿಗೆಲ್ಲಾ ತಲಪಿಸಲಿಕ್ಕಾಗಿ ಓಡುತ್ತಾ, ಹಿಂದಿರುಗಿ ಬಂದು ಕಣ್ಣಿಗೆ ಕಂಡವರ ಹತ್ತಿರವೆಲ್ಲಾ, "ಪಾಪ, ಇವತ್ತು ಬೆಳಿಗ್ಗೆ ಪಟೇಲ ಪಟ್ಟಾಭಿರಾಮರು ತೀರಿಹೋದರು. ಅದಕ್ಕೇ ಅವರು ಈ ದಿನ ಬೆಳಿಗ್ಗೆ ಬರಲಿಲ್ಲ. ಶವವನ್ನು ನಾನು ಕಣ್ಣಾರೆ ನೋಡಿದೆ" ಎಂದು ಹೇಳಲು ತೊಡಗಿದನು.

ಒಬ್ಬನಾದರೂ ಅವನು ಹೇಳಿದ ವಾರ್ತೆಯನ್ನು ನಂಬಿದ ಹಾಗೆ ಉದ್ಗಾರತೆಗೆಯಲಿಲ್ಲ. ಸೂರಪ್ಪನು ತುಂಬಾ ನೊಂದುಕೊಂಡನು. ನಿಜ ಹೇಳಿದರೂ ತನ್ನ ಮಾತನ್ನು ಯಾರೂ ನಂಬುವುದಿಲ್ಲವೇಕೋ? ತನ್ನ




ಮಾತು ನಿಜವೆಂದು ಎಲ್ಲರಿಗೂ ನಂಬುಗೆಯುಂಟು ಮಾಡುವುದು ಹೇಗೆ?

"ಅಯ್ಯಾ! ಆ ಊರಿನಲ್ಲಿ ಅಷ್ಟು ದೊಡ್ಡ ಮನುಷ್ಯರು ತೀರಿಹೋದುದಕ್ಕೆ ನಮ್ಮೂರಿನ ಹಿರಿಯರು ಕೆಲವರು ಹೋಗಿ ದುಃಖ ವಿಚಾರಿಸಿ ಬರುವುದು ಒಳ್ಳೇದಲ್ಲವೆ? ಹೊರಡಿರಯ್ಯಾ, ಆಗ ನಿಮಗೇ ನಿಜ ಗೊತ್ತಾಗುತ್ತದೆ" ಎಂದನು ಸೂರಪ್ಪ.

ಅಷ್ಟು ಹೇಳಿದರೂ ಅವನ ಮಾತನ್ನು ಯಾರೂ ಕಿವೀ ಮೇಲೆ ಹಾಕಿಕೊಳ್ಳಲಿಲ್ಲ. ಕೆಲವರು ಸೂರಪ್ಪನೊಂದಿಗೆ, "ಆ ಊರಿನ ಪಟೇಲರ ಶವವನ್ನು ನೋಡಿದೆನೆನ್ನುವೆಯಲ್ಲಾ, ಅಸಲು ಪಟ್ಟಾಭಿರಾಮರು ಹೇಗಿದ್ದಾರೆಂಬುದನ್ನಾದರೂ ನೀನು ನೋಡಿರುವೆಯೇನು?" ಎಂದು ಕೇಳಿದರು.

"ಅಷ್ಟೊಂದು ದೊಡ್ಡ ಮನುಷ್ಯರು ಹೋದರೆ ಆ ವಾರ್ತೆ ತಿಳಿಯಲಿಕ್ಕೆ ಶವದ ಗುರ್ತು ಹಿಡೀಬೇಕೇ?" ಎಂದನು ಸೂರಪ್ಪ. ಈ ಜನರಿಗೆ ಏನು

ಹೇಳಬೇಕೋ ? ಆ ಊರಿನ ಪಟೇಲರು ಸತ್ತು ಹೋದರೆ ಈ ಊರಿನವರು ಕಸಕ್ಕೆ ಸಮಮಾಡಿ ತೀರ ಅನ್ಯಾಯ ಮಾಡುತ್ತಿದ್ದಾರೆ. ನಮ್ಮೂರಿನ ಮರ್ಯಾದೆಗೇ ಕೇಡು. ಆದ್ದರಿಂದ ಆ ಊರಿನಿಂದಲೇ ಒಬ್ಬನನ್ನು ಕರೆದುಕೊಂಡು ಬಂದು ಹೇಳಿಸಿದರೆ, ತನ್ನ ಮೇಲೆ ಊರವರಿಗಿರುವ ದುರಭಿಪ್ರಾಯವು ಹೋಗಿ ಬಿಡುತ್ತದೆ.

ಹೀಗೆಂದುಕೊಂಡು ಸೂರಪ್ಪನು ಮತ್ತೊಂದು ಸಾರಿ ಆ ಊರಿಗೆ ಹೊರಟನು. ದಾರಿಯಲ್ಲಿ ಅವನಿಗೊಬ್ಬ ದೊಡ್ಡ ಮನುಷ್ಯನು ಇದಿರಾದನು, ಆತನು ಆ ಊರಿನಿಂದಲೇ ಬರುವವನೆಂದು ಪಕ್ಕದಲ್ಲಿದ್ದವರನ್ನು ಕೇಳಿ ತಿಳಿದುಕೊಂಡು ಸೂರಪ್ಪನು ಅವರನ್ನು ನೋಡಿ, "ಸ್ವಾಮಿ, ಒಂದು ಮಾತು. ನಿಮ್ಮೂರಿನ ಪಟೇಲ ಪಟ್ಟಾಭಿರಾಮರು ತೀರಿ ಹೋದರೆಂಬುದನ್ನು ನೀವಾದರೂ ನಂಬುವಿರಷ್ಟೆ ? ನಮ್ಮೂರಿನಲ್ಲಿ ಯಾರೂ ನಂಬುವುದಿಲ್ಲ" ಎಂದನು.

"ಬಿಲ್‌ಗುಲ್ ನಾನೂ ಸಹ ನಂಬುವುದಿಲ್ಲ !" ಎಂದನು ಆ ದೊಡ್ಡ ಮನುಷ್ಯ.

"ಯಾಕೆ ನಂಬುವುದಿಲ್ಲ ಸ್ವಾಮಿ ?" ಎಂದು ಸೂರಪ್ಪ ಆಶ್ಚರ್ಯದಿಂದ ಕೇಳಿದ.

"ನಾನೇ ಪಟೇಲ ಪಟ್ಟಾಭಿರಾಮನಾದ್ದರಿಂದ !" ಎಂದ ಮಾತು ಕೇಳಿ, ಕೆನ್ನೆಗೆ ಏಟು ಬಿದ್ದಂತೆ ಸೂರಪ್ಪನು ನಿಶ್ಚೇಷ್ಟಿತನಾದನು. ಆ ಮೇಲೆ ಸ್ವಲ್ಪ ಸಮಾಳಿಸಿಕೊಂಡು, ಆ ದಿನ ಮಧ್ಯಾಹ್ನ ಶವದ ಮೆರವಣಿಗೆಯಲ್ಲಿ ತನಗೂ ಇನ್ನೊಬ್ಬನಿಗೂ ನಡೆದ ಸಂಭಾಷಣೆಗಳನ್ನು ನಡೆದುದು ನಡೆದ ಹಾಗೆ ಅವರೊಂದಿಗೆ ಹೇಳಿದನು.

"ಹೌದಪ್ಪ. ಅಕಸ್ಮಾತ್ತಾಗಿ ಈ ದಿನ ಬೆಳಿಗ್ಗೆ ಊರೊಳಗಿನ ದೊಡ್ಡ ಸಾವುಕಾರ್ರು ತೀರಿಹೋದರು, ಆದ್ದರಿಂದಲೇ ನಾನು ನಿಮ್ಮೂರಿಗೆ ಬರಲಾಗಲಿಲ್ಲ. ನಾನೂ ಅವರ ಸಂಸ್ಕಾರದಲ್ಲಿ ಸೇರಿದ್ದೆ. ಅದಕ್ಕೇ ನೀನು ಮಾತಾಡಿಸಿದವನು ಹಾಗೆಂದಿರಬಹುದು. ಊರವರ ಬಾಯಿಯಲ್ಲಿ ಸಾವುಕಾರ್ರೂ ದೊಡ್ಡ ಮನುಷ್ಯರು, ನಾನೂ ದೊಡ್ಡ ಮನುಷ್ಯ. ಅದಕ್ಕೇ ಯಾವ ಸಮಾಚಾರವನ್ನಾದರೂ ಮನಸ್ಸಿಟ್ಟು ನೋಡಿ ತಿಳಿದುಕೊಳ್ಳಬೇಕು. ಮಾತಿನ ಸರಳಿಗಳನ್ನು ಹಾಗೆಹಾಗೇ ನಂಬಿ ಬಿಡಬಾರದು" ಎಂದರು ಪಟ್ಟಾಭಿರಾಮರು.

ಸೂರಪ್ಪನ ಮನಸ್ಸಿನೊಳಗೆ ಜ್ಞಾನದ ಪ್ರಕಾಶ ಹರಿಯಿತು. ಸುಳ್ಳನ್ನು ಸತ್ಯದಂತೆ ಮಾಡಿ ಹೇಳಿದರೂ ಜನರು ನಂಬದಿರುವಾಗ, ನಿಜವನ್ನು ತಿಳಿದುಕೊಳ್ಳದೆಯೇ ಸುದ್ದಿ ಹೇಳುವ ತನ್ನನ್ನು ಯಾರೂ ನಂಬದೆ ಹೋದುದರಲ್ಲಿ ಆಶ್ಚರ್ಯವೇನಿಲ್ಲವೆನಿಸಿತು. ಅಂದಿನಿಂದ ಅವನ ಬಿಸಿಬಿಸಿ ಸುದ್ದಿ ಹೇಳಬೇಕೆಂಬ ಕುತೂಹಲವೂ ತಣ್ಣಗಾಯಿತು.





# ದೇವೀ ಭಾಗವತ

ಕಂಸನು ವಸುದೇವನನ್ನೂ ದೇವಕಿಯನ್ನೂ ಕಾರಾಗೃಹದಲ್ಲಿ ಇರಿಸಿ, ಎಚ್ಚರಿಕೆಯಿಂದ ನೋಡಿಕೊಳ್ಳಬೇಕೆಂದು ಕಾವಲು ಭಟರಿಗೆ ಅಪ್ಪಣೆ ಮಾಡಿದನು. ಎಂಟನೆಯ ಸಾರಿ ಗರ್ಭಿಣಿಯಾದ ದೇವಕಿಗೆ ಹತ್ತು ತಿಂಗಳು ತುಂಬಿದುವು.

ಶ್ರಾವಣ ಮಾಸ ಬಹುಳ ಅಷ್ಟಮಿಯ ದಿನ ಬಂದಿತು. ಆ ದಿನ ರೋಹಿಣೀ ನಕ್ಷತ್ರ. ಅವಳ ಪ್ರಸವದ ದಿನವನ್ನೇ ನಿರೀಕ್ಷಿಸಿಕೊಂಡಿದ್ದ ಕಂಸನಿಗೆ ತುಂಬಾ ಭಯವಾಗುತಿತ್ತು. ಅವನು ಭಟರೊಂದಿಗೆ, "ಇದು ಎಂಟನೇ ಗರ್ಭ. ನನಗೆ ಮಾರಕವಾದದ್ದು. ಈ ಗರ್ಭದಲ್ಲಿ ಹುಟ್ಟುವವನೇ ನನ್ನನ್ನು ಕೊಲ್ಲುತ್ತಾನಂತೆ. ಅವನನ್ನು ಕೊಂದ ಹೊರತು ನನಗೆ ನಿದ್ದೆ ಬಾರದು. ಮಗುವನ್ನು ಭೂಮಿಯ ಮೇಲೆ ಬೆಳೆಯಲಿಕ್ಕೇ ಬಿಡಬಾರದು. ನೀವು ಎಚ್ಚರ ತಪ್ಪಿದರೆ ಸರ್ವನಾಶವೇ ಆದೀತು! ರೆಪ್ಪೆಗೆ ರೆಪ್ಪೆ ಹಚ್ಚದೆ ಜಾಗರೂಕತೆಯಿಂದ ನೋಡುತ್ತಿದ್ದು ಹಡೆದ ಕೂಡಲೇ ನನಗೆ ಬಂದು ಹೇಳಬೇಕು" ಎಂದು ಕಟ್ಟಪ್ಪಣೆ ಮಾಡಿ, ಸ್ವಲ್ಪವೂ ಮನಃಶಾಂತಿ ಇಲ್ಲದವನಾಗಿದ್ದನು. ಭಟರು ಆಯುಧಗಳನ್ನು ಧರಿಸಿಕೊಂಡು ತುಂಬಾ ಶ್ರದ್ಧೆಯಿಂದ ಸೆರೆಮನೆಯ ಕಾವಲು ಕಾಯುತ್ತಿದ್ದರು.

ರಾತ್ರಿಯಲ್ಲಿ ದೇವಕಿಗೆ ಪ್ರಸವ ವೇದನೆ ಪ್ರಾರಂಭವಾಯಿತು. ಅವಳು ವಸುದೇವನೊಂದಿಗೆ ಹೀಗೆಂದಳು: "ನನಗೆ ಇನ್ನು ಸ್ವಲ್ಪ ಹೊತ್ತಿನಲ್ಲಿ ಪ್ರಸವವಾಗುತ್ತದೆ. ಇಲ್ಲಿ ಸುತ್ತಲೂ ರಾಕ್ಷಸರು ಕಾವಲು ಕಾಯುತ್ತಿದ್ದಾರೆ. ಈ ಮೊದಲು ನಾನೂ ನಂದನ ಹೆಂಡತಿ ಯಶೋದೆಯೂ ನಮಗೆ ಹುಟ್ಟುವ ಮಕ್ಕಳನ್ನು ಅದಲು ಬದಲು ಮಾಡಿಕೊಳ್ಳಬೇಕೆಂದು ಮಾತಾಡಿಕೊಂಡೆವು. ಆ ಕೆಲಸ ಈಗ ಸಾಧ್ಯವಾಗುವ ಹಾಗೆ ಕಾಣುವುದಿಲ್ಲವಲ್ಲಾ? ಏನು ಮಾಡುವುದು?"

ಈ ಮಾತು ಹೇಳುತ್ತಿರುವಾಗಲೇ ದೇವಕಿಗೆ ನೋವು ಜೋರಾಯಿತು. ಮಗುವೂ ಹುಟ್ಟಿತು. ಮೌನವಾಗಿ ಕೈಕಾಲಾಡಿಸುವ ಆ ಮಗು ದಿವ್ಯ ಸುಂದರ ಮೂರ್ತಿಯಾಗಿದ್ದಿತು. ದೇವಕಿ ತನ್ನ ಗಂಡನನ್ನು ಹತ್ತಿರಕ್ಕೆ ಕರೆದು ಮಗುವನ್ನು ತೋರಿಸಿ,

೧೩. ಕೃಷ್ಣನ ಜನನ-ಬೆಳೆವಣಿಗೆ



"ಇವನ ಮುಖದ ಕಾಂತಿಯನ್ನು ನೋಡಿರಿ. ಕಣ್ಣುಗಳ ಹೊಳಪನ್ನೂ, ಮೃದುವಾದ ಶರೀರವನ್ನೂ ನೋಡಿರಿ! ಯಾರಿಗಾದರೂ ಇಂತಹ ಸುಂದರ ಶಿಶು ಹುಟ್ಟಿದೆಯೆ ? ಸಾಯುವ ಮಗುವಿಗೆ ಇಷ್ಟೊಂದು ರೂಪ ಯಾಕೆ ದೇವರೇ ! ಇವನನ್ನು ಕೈಯಾರೆ ಎತ್ತಿಕೊಂಡು ಹೋಗಿ ಕೊಲ್ಲಲಿಕ್ಕೆ ಹೇಗೆ ಕೊಡುವಿರಿ ? ಕೊಟ್ಟು, ನಾನಾದರೂ ಹೇಗೆ ಬದುಕಿರಲಿ?" ಎಂದಳು.

ವಸುದೇವನು ಆ ಮಗುವನ್ನು ನೋಡುತ್ತಾ, ಏನು ಹೇಳಲೂ ತೋರದೆ, ಸ್ತಬ್ಧನಾಗಿದ್ದುಬಿಟ್ಟನು. ಆಗ ಒಂದು ಆಕಾಶವಾಣಿ ಕೇಳಿಸಿತು : "ವಸುದೇವಾ! ಕಾವಲಿನವರೆಲ್ಲಾ ನನ್ನ ಮಾಯೆಯಿಂದ ಗಾಢ ನಿದ್ರೆಯಲ್ಲಿದ್ದಾರೆ. ಕಾರಾಗೃಹದ ದ್ವಾರಗಳೆಲ್ಲ ತೆರೆದೇ ಇವೆ. ನಿನಗೆ ಯಾವ ತಡೆಯೂ ಇಲ್ಲ. ಈ ಮಗುವನ್ನು ಗೋಕುಲಕ್ಕೆ ತೆಗೆದುಕೊಂಡು ಹೋಗಿ ಯಶೋದೆಗೆ ಕೊಡು." ಹೀಗೆ ಹೊರಟ ದೇವಿಯ ದಿವ್ಯವಾಣಿಯ ಶ್ರವಣದಿಂದ ವಸುದೇವನ ಸಮಸ್ಯೆ ಬಗೆ ಹರಿಯಿತು. ದೇವಕಿಗೂ ಸಮಾಧಾನವಾಯಿತು. ವಸುದೇವನು ಕೂಡಲೇ ಆ ಮಗುವನ್ನು ಎತ್ತಿಕೊಂಡು, ತೆರೆದೇ ಇದ್ದ ಸೆರೆಮನೆಯ ಎಂಟು ದ್ವಾರಗಳನ್ನೂ ದಾಟಿ, ಯೋಗಮಾಯೆಯ ಪ್ರಭಾವದಿಂದ ಯಾರ ಕಣ್ಣಿಗೂ ಬೀಳದೆ ವೇಗವಾಗಿ ಸಾಗಿದನು. ಕಾಳಿಂದೀ ನದಿಯ ತೀರವನ್ನು ಸೇರಿ, "ಈ ನದಿಯನ್ನು ಹೇಗೆ ದಾಟಲಿ ?" ಎಂದು ಅವನು ಆಲೋಚಿಸುವಷ್ಟರಲ್ಲಿ, ನದಿಯ ನೀರು ಪಾದದಷ್ಟೇ ಆಳತೆಗೆ ತಗ್ಗಿಹೋಯಿತು. ವಸುದೇವನು ಶೀಘ್ರಗತಿಯಲ್ಲಿ ನಡೆದು ಗೋಕುಲವನ್ನು ತಲಪಿ, ನಂದನ ಮನೆಯನ್ನು ಪ್ರವೇಶಿಸಿದನು. ಮನೆಯ ಮುಂದೆ ಗೋವುಗಳ ಮಂದೆ ಇದ್ದಿತು.

ಆಗಲೇ ನಂದನ ಹೆಂಡತಿಯಾದ ಯಶೋದೆಗೆ ಯೋಗಮಾಯಾದೇವಿ ಹೆಣ್ಣು ಮಗುವಾಗಿ ಹುಟ್ಟಿದ್ದಳು. ಯಶೋದೆ ವಸುದೇವನನ್ನು ಬರಮಾಡಿ, ತನ್ನ ಮಗುವನ್ನು ವಸುದೇವನಿಗೆ ಒಪ್ಪಿಸಿದಳು. ಅವನ ಮಗುವನ್ನು ತಾನು ಬೆಳೆಯಿಸಲು ತೆಗೆದುಕೊಂಡಳು. ವಸುದೇವನು ಆ ಹೆಣ್ಣು ಮಗುವನ್ನು ಎತ್ತಿಕೊಂಡು ವೇಗವಾಗಿ ಹಿಂದಿರುಗಿ ಕಾರಾಗೃಹಕ್ಕೆ ಬಂದು ದೇವಕಿಯ ಬದಿಯಲ್ಲಿರಿಸಿ, ಇನ್ನೇನಾಗುವುದೋ ಎಂಬ ಚಿಂತೆಯಿಂದ ಒಂದು ಮೂಲೆಯಲ್ಲಿ ಕುಳಿತನು. ಆಗ ಆ ಹೆಣ್ಣು ಮಗು ಆಗಲೇ ಹುಟ್ಟಿದಂತೆ ಮೆಲ್ಲಮೆಲ್ಲನೆ ಅಳಲು ಪ್ರಾರಂಭಮಾಡಿತು.

ಅದನ್ನು ಕೇಳಿ ಕಾವಲುಭಟರು; ಗಾಬರಿಯಿಂದ ಕಣ್ಣುಜ್ಜಿ ಕೊಂಡೆದ್ದು, ಓಟದ ನಡಿಗೆಯಿಂದ ಕಂಸನ ಬಳಿಗೆಹೋಗಿ, ದೇವಕಿ ಪ್ರಸವಿಸಿದ ಸಮಾಚಾರವನ್ನು ಹೇಳಿದರು. ಆ ಮಾತು ಕೇಳಿದ ಕೂಡಲೇ ಕಂಸನು ವೇಗವಾಗಿ ಕಾರಾಗೃಹಕ್ಕೆ ಬಂದು ವಸುದೇವನೊಂದಿಗೆ, "ಇದು ದೇವಕಿಯ ಎಂಟನೇ ಮಗು. ಸಾಕ್ಷಾತ್ ವಿಷ್ಣುಮೂರ್ತಿಯೇ ನನ್ನನ್ನು ಕೊಲ್ಲಲಿಕ್ಕಾಗಿ ಇವಳ ಎಂಟನೇ ಮಗುವಾಗಿ ಹುಟ್ಟಿದ್ದಾನಂತೆ! ಇವನನ್ನು

ಕೊಲ್ಲಲೇ ಬೇಕು! ಎಲ್ಲಿ ಮಗು ? ಇತ್ತ ತಾ!" ಎಂದನು ಆತುರದಿಂದ ಕೈಗಳನ್ನು ಚಾಚುತ್ತ.

ವಸುದೇವನು ಹೆದರುವವನಂತೆ ಹೋಗಿ ಆ ಹೆಣ್ಣು ಮಗುವನ್ನೆತ್ತಿ ತಂದು ಕಂಸನ ಕೈಗೆ ಕೊಟ್ಟನು. ಕಂಸನು ಆ ಮಗುವನ್ನು ನೋಡಿ, ಅನುಮಾನ ಪಡುತ್ತ ತನ್ನಲ್ಲಿ, "ಇದೇನಿದೇನು ? ವಿಚಿತ್ರವಾಗಿದೆ! ಆಕಾಶವಾಣಿಯ ಮಾತು ಸುಳ್ಳಾಗುವುದುಂಟೆ ? ಈ ವಸುದೇವನೇನಾದರೂ ಮಾಯೆ ಮಾಡಿದ್ದಾನೆಯೆ? ಸುತ್ತಲೂ ಬಲವಾದ ಕಾವಲಿನವರಿರುವಾಗ ಈ ಹೆಣ್ಣು ಮಗು ಹೇಗೆ ಬಂತು ? ಎಲ್ಲಿಂದ ಬಂತು ? ಗಂಡು ಮಗು ಎಲ್ಲಿಗೆ ಹೋಯಿತು ? ಆಶ್ಚರ್ಯವಾಗಿದೆ!" ಎಂದು ಕಳವಳಿಸುತ್ತ ನಾಲ್ಕು ಮೂಲೆಗಳನ್ನೂ ನೋಡಿದನು. ಆ ಮೇಲೆ ಆ ಮಗುವಿನ ಕಾಲುಗಳನ್ನು ಹಿಡಿದು ಬೀಸುತ್ತ, ಹೊರಗೆ ಒಯ್ದು ಕೊಲೆಗಲ್ಲಿನ ಮೇಲೆ ಅಪ್ಪಳಿಸಲು ಮೇಲೆತ್ತಿದನು.

ಆಗ ಆ ಮಗು ಕಂಸನ ಕೈಯಿಂದ ಜಾರಿ ಮೇಲೆ ಹಾರಿ, ದೇವತೆಯ ಆಕಾರ ಧರಿಸಿ ಮೃದು ಮಧುರವೂ, ಗಂಭೀರವೂ ಆದ ಸ್ವರದಿಂದ, "ಎಲೋ ದುಷ್ಟಾತ್ಮನೇ! ನನ್ನನ್ನು ಕೊಂದ ಮಾತ್ರಕ್ಕೆ ನಿನಗೇನೂ ಆಗದು. ನಿನ್ನನ್ನು ಕೊಲ್ಲುವ ವೀರನು ಹುಟ್ಟಿ ಬೆಳೆಯುತ್ತಾ ಇದ್ದಾನೆಂದು ತಿಳಿ. ಅವನಿಂದಲೇ ನಿನಗೆ ಮರಣ" ಎಂದು ಹೇಳಿ ಅದೃಶ್ಯವಾದಳು.

ಅದನ್ನು ಕೇಳಿ ಕಂಸನ ಬುದ್ಧಿ ನುಚ್ಚು ನೂರಾಗಿ ದಿಕ್ಕು ದಿಕ್ಕುಗಳಿಗೆ ಚೆದರಿದಂತಾಯಿತು. ಅವನು ಕೈ ಮೈಸುಟ್ಟುಕೊಂಡವನ ಹಾಗೆ ಒದರಾಡುತ್ತ ಮನೆಗೆ ಹೋಗಿ, ತನ್ನ ಹಿತರಾದ ಬಕ, ಧೇನುಕ, ವತ್ಸಕ, ಪ್ರಲಂಬ ಮೊದಲಾದವರೊಂದಿಗೆ ಹೀಗೆಂದನು:

"ಗೋಕುಲದಲ್ಲಿಯಾಗಲೀ ಮತ್ತೆಲ್ಲಿಯೇ ಆಗಲಿ, ಇತ್ತೀಚೆಗೆ ಹುಟ್ಟಿದ ಗಂಡು ಶಿಶುಗಳನ್ನು, ಕೊಂದು ಬಿಡಿರಿ. ಯಾವ ಅನುಮಾನಕ್ಕೂ ಆಸ್ಪದ ಕೊಡ ಬೇಡಿರಿ. ನೀವೆಲ್ಲರೂ ನನಗಾಗಿ ತುಂಬ ಎಚ್ಚರಿಕೆ



ಯಿಂದ ಈ ಕೆಲಸಮಾಡಬೇಕು. ವಿಷವನ್ನು ಸ್ರವಿಸುವ ಪೂತನಿಯನ್ನೂ ಕರೆದುಕೊಂಡು ಹೋಗಿರಿ."

ಅಲ್ಲಿ ಗೋಕುಲದಲ್ಲಿ ಬೆಳಗಾದ ಮೇಲೆ ನಂದನು ತನಗೆ ಪುತ್ರೋದಯವಾಯಿತೆಂದು ಸಂತೋಷಪಟ್ಟು ಉತ್ಸವಮಾಡಿಕೊಂಡಿದ್ದನು. ಈ ಸಮಾಚಾರ ನಾಲ್ಕು ದಿಕ್ಕುಗಳಿಗೂ ಹರಡಿತು. ಕಂಸನ ದೂತರು ಈ ವಾರ್ತೆಯನ್ನು ಕಂಸನಿಗೆ ತಿಳಿಸಿದರು. ಮೊದಲು ನಾರದನು ಕೂಡಾ ದೇವತೆಗಳು ಮಾಡಿದ ಪಥಕವನ್ನು ಕುರಿತು ಎಚ್ಚರಿಕೆ ಕೊಟ್ಟಿದ್ದನಷ್ಟೆ? ಅದು ನೆನಪಿಗೆ ಬಂದು ಕಂಸನು ದೇವತೆಗಳು ಏನೋ ತಂತ್ರಮಾಡಿ ಅದಲು ಬದಲು ಮಾಡಿರಬೇಕೆಂದು ಕೊಂಡು, ಗೋಕುಲದ ಮೇಲೆಯೇ ಗುರಿಯಿಟ್ಟನು.

ಮೊದಲು ಕೃಷ್ಣನಿಂದ ಪೂತನಿ ಸತ್ತಳು. ಅನಂತರ ಬೆಳೆಯುತ್ತಾ ಬರುವ ಕೃಷ್ಣನು ಮಹಾ ಬಲಶಾಲಿಗಳಾದ ಧೇನುಕ, ವತ್ಸಕ, ಬಕ, ಪ್ರಲಂಬರೆಂಬ ಮಾಯಾವಿಗಳನ್ನು ಕೊಂದನು. ಎಷ್ಟೋ ಕೃಷ್ಣನ



ಲೀಲೆಗಳು ಪ್ರಕಟವಾದುವು. ಗೋವುಗಳನ್ನು ರಕ್ಷಿಸಲಿಕ್ಕಾಗಿ ಗೋವರ್ಧನ ಬೆಟ್ಟವನ್ನೇ ಎತ್ತಿ ಹಿಡಿದನು. ಕೃಷ್ಣನ ಅದ್ಭುತ ಸಮಾಚಾರಗಳನ್ನೆಲ್ಲಾ ಕೇಳುತ್ತಾ ಬಂದ ಕಂಸನಿಗೆ ತನ್ನ ಮರಣವು ಅವನ ಕೈಯಲ್ಲೇ ಎಂಬ ಮಾತು ನಿಜವೆನಿಸಿತು. ಕೇಶಿ ಎಂಬ ಕಂಸನ ಬಂಟನಾದ ಮಹಾಬಲಿಷ್ಠನು ಕೃಷ್ಣನ ಕೈಯಲ್ಲಿ ಸತ್ತ ಮೇಲೆ, ಇನ್ನು ತಡಮಾಡಿದರೆ ಕೃಷ್ಣನ ಬಲವು ಇನ್ನಷ್ಟು ಹೆಚ್ಚುವುದೆಂದು ಅಂಜಿ ಕಂಸನು, ಕೃಷ್ಣನನ್ನು ಬೇಗನೇ ಕೊಲ್ಲಬೇಕೆಂದು ನಿಶ್ಚಯಿಸಿದನು. ಅವನು ಮರಣದ ಬಳಿಗೆ ಹೋಗುವುದಕ್ಕೆ ಬದಲಾಗಿ, ಅವನೇ ಮರಣವನ್ನು ತನ್ನ ಬಳಿಗೆ ಆಹ್ವಾನಿಸುವಂತೆ, ಕೃಷ್ಣನನ್ನು ಆಹ್ವಾನಿಸಲು ಒಂದು ಯೋಜನೆಯನ್ನು ಹಾಕಿದನು.

ತಾನು ಧನುರ್ಯಾಗ ಮಾಡುವೆನೆಂದು ಪ್ರಕಟಿಸಿ, ಅದಕ್ಕೆ ಬಲರಾಮನನ್ನೂ ಕೃಷ್ಣನನ್ನೂ ಕರೆದುಕೊಂಡು ಬರಬೇಕೆಂದು, ರಥದ ಮೇಲೆ ಅಕ್ರೂರನನ್ನು ಗೋಕುಲಕ್ಕೆ ಕಳುಹಿಸಿದನು ಕಂಸ. ಅದರಂತೆ ಬಲರಾಮಕೃಷ್ಣರು ಅಕ್ರೂರನೊಂದಿಗೆ ಬಂದರು. ಧನುರ್ಯಾಗದಲ್ಲಿ ಸ್ಪರ್ಧಿಸಿ ಎಲ್ಲಾ ರಾಜರನ್ನೂ ಸೋಲಿಸಿದರು. ಮದ್ದಾನೆಯನ್ನು ಕೊಂದರು. ಚಾಣೂರ, ಮುಷ್ಟಿಕರೆಂಬ ಮಹಾ ಜಟ್ಟಿಗಳನ್ನು ಮಣ್ಣುಗೂಡಿಸಿದರು. ಶಲನನ್ನೂ, ಕೋಶಲನನ್ನೂ ಸಂಹರಿಸಿದರು. ಕಡೆಗೆ ಕಂಸನ ಜುಟ್ಟು ಹಿಡಿದು ಎಳೆದು ಕೆಡವಿ ಕೊಂದು ತೀರಿಸಿ, ಸೆರೆಮನೆಯ ಬಂಧನದಲ್ಲಿರುವ ದೇವಕೀ ವಸುದೇವರನ್ನು ಬಂಧಮುಕ್ತರನ್ನಾಗಿ ಮಾಡಿದರು. ಅನಂತರ ಕಂಸನಿಂದ ಸೆರೆಗೊಡಲ್ಪಟ್ಟ ಉಗ್ರಸೇನನನ್ನು ಕರೆದು ತಂದು ಸಿಂಹಾಸನದಲ್ಲಿ ಕೂಡಿಸಿದರು.

ಇಷ್ಟಾದ ಮೇಲೆ ವಸುದೇವನು ಬಲರಾಮಕೃಷ್ಣರಿಗೆ ಉಪನಯನಮಾಡಿ, ಸಾಂದೀಪನಿ ಎಂಬ ಗುರುವಿನ ಬಳಿಗೆ ವಿದ್ಯಾಭ್ಯಾಸಕ್ಕಾಗಿ ಕಳುಹಿಸಿದನು. ಹನ್ನೆರಡು ವರ್ಷ ತುಂಬುವಾಗ ಬಲರಾಮ ಕೃಷ್ಣರು ಎಲ್ಲಾ ವಿದ್ಯೆಗಳನ್ನೂ ಕಲಿತು ಮುಗಿಸಿದರು.

ಇಷ್ಟರಲ್ಲಿ ಜರಾಸಂಧನು ತನ್ನ ಅಳಿಯನಾದ ಕಂಸನು ಕೃಷ್ಣನ ಕೈಯಲ್ಲಿ ಸತ್ತನೆಂದು ತಿಳಿದು ಮಥುರಾ ನಗರದ ಮೇಲೆ ದಂಡೆತ್ತಿ ಬಂದನು. ಭಯಂಕರವಾದ ಯುದ್ಧದಲ್ಲಿ ಜರಾಸಂಧನು ಆಗ ಸೋತನು. ಆ ಮೇಲೆ ಜರಾಸಂಧನು ಬಿಡದೆ ಏಳುಸಾರಿ ಹೆಚ್ಚೆಚ್ಚು ಬಲದೊಂದಿಗೆ ಯುದ್ಧಕ್ಕೆ ಬಂದುದು ಸಾಲದೆ, ಮ್ಲೇಚ್ಛರಾಜನಾದ ಕಾಲಯವನನನ್ನೂ ಕೆರಳಿಸಿ ಮಥುರೆಯ ಮೇಲೆ ಅವನಿಂದಲೂ ದಂಡೆತ್ತಿಸಿದನು. ಆಗ ಕೃಷ್ಣನು ಯಾದವರನ್ನೆಲ್ಲಾ ಸಮಾವೇಶ ಗೊಳಿಸಿ, "ದುಷ್ಟನಾದ ಜರಾಸಂಧನು ಸಾಧಾರಣದಲ್ಲಿ ಬಿಡುವವನಲ್ಲ. ಈಗ ಕಾಲಯವನನನ್ನು ಕಳುಹಿಸಿದ್ದಾನೆ. ಇವನು ಕೂಡಾ ತುಂಬಾ ಬಲವಂತನು. ಇವನ ಸೇನೆಯೂ ಬಹಳ ದೊಡ್ಡದು. ಆದುದರಿಂದ ಈ ದುಷ್ಟನೊಂದಿಗೆ ಯುದ್ಧಮಾಡುವುದು ಬಹಳ ಕಷ್ಟ.



ಪ್ರಾಣವನ್ನು ಕಾಪಾಡಿಕೊಳ್ಳಲಿಕ್ಕಾಗಿ ಸಂಪತ್ತನ್ನೂ ಮನೆಯನ್ನೂ ಬಿಟ್ಟುಕೊಡುವುದು ತಪ್ಪೆನಿಸುವುದಿಲ್ಲ. ಯಾವ ಸ್ಥಳದಲ್ಲಿ ವಾಸವಾಗಿರಲು ಸಾಧ್ಯವೋ ಅದೇ ತಮ್ಮ ಪಿತ್ರಾರ್ಜಿತವೆಂದುಕೊಳ್ಳಬೇಕು. ಸ್ವಸ್ಥಳವೆನಿಸುವಂತಹುದು ಎಂದೆಂದಿಗೂ ಅಪಾಯಕರವಾದಾಗ, ಗುಡ್ಡಗಾಡುಗಳ ಕಡೆಗಾದರೂ ಹೋಗಿ ನೆಮ್ಮದಿಯಾಗಿರುವುದು ಒಳ್ಳೆಯದೆಂದು ಹಿರಿಯರು ಹೇಳುತ್ತಾರೆ. ಇಂತಹ ಭಯದಿಂದ ತಾನೇ ವಿಷ್ಣು ಸಮುದ್ರದ ಮಧ್ಯಕ್ಕೆ ಹೋಗಿ ಹಾವಿನ ಮೇಲೆ ಮಲಗಿಕೊಳ್ಳುತ್ತಾನೆ! ಶಿವನು ರಜತಾದ್ರಿಯ ಗುಹೆಯೊಳಗೆ ವಾಸಮಾಡುತ್ತಾನೆ! ಇನ್ನು ನಮ್ಮಂಥವರ ಸಂಗತಿ ಹೇಳುವುದೇನಿದೆ? ಅಂತಲೇ ನಾವೆಲ್ಲಾ ಬೇಗನೇ ಈ ಮಧುರಾ ನಗರವನ್ನು ಬಿಟ್ಟು ಹೊರಟು ಹೋಗಿ, ದ್ವಾರಕಾಪುರಿಯಲ್ಲಿ ಸುಖವಾಗಿರುವುದು ಒಳ್ಳೆಯದು. ದ್ವಾರಕಾಪುರವು ರೈವತಾದ್ರಿಗೆ ಸಮೀಪವಾಗಿ ಸಮುದ್ರ ತೀರದಲ್ಲಿದೆಯೆಂದೂ, ಬಹಳ ಸುಂದರವಾದ ಪ್ರದೇಶವೆಂದೂ ನಮ್ಮ ಗರುತ್ಮಂತನು ಹೇಳುತ್ತಾನೆ" ಎಂದನು.

ಕೃಷ್ಣನ ಮಾತಿಗೆ ಯಾದವರೆಲ್ಲರೂ ಒಪ್ಪಿ, ತಮ್ಮ ತಮ್ಮ ಕುಟುಂಬಗಳೊಂದಿಗೆ ಬಲರಾಮಕೃಷ್ಣರ ಜತೆಯಲ್ಲಿ ಹೊರಟು, ಕೆಲವು ದಿನಗಳ ಮೇಲೆ ದ್ವಾರಕೆಯನ್ನು ಸೇರಿದರು. ಅಲ್ಲಿ ಶಿಥಿಲವಾಗಿದ್ದ ಮನೆಗಳನ್ನೂ ಮಂದಿರಗಳನ್ನೂ ಸರಿಮಾಡಿಕೊಂಡು, ವಾಸಮಾಡಲು ತೊಡಗಿದರು. ಮಧುರಾಪುರವು ಕೇವಲ ನಿರ್ಜನ ಪ್ರಾಂತವಾಯಿತು.

ಬಲರಾಮನೂ ಕೃಷ್ಣನೂ ಕಾಲಯವನನನ್ನು ಗುರಿಯಲ್ಲಿಟ್ಟುಕೊಂಡು, ನಿರ್ಜನವಾದ ಮಧುರೆಗೆ ಹಿಂದಿರುಗಿ ಬಂದು ಹೊಂಚು ಹಾಕಿಕೊಂಡಿದ್ದರು. ಹಾಗಿರುವಾಗ ಕಾಲಯವನನು ತಿರುಗಿ ಮಧುಗೆ ಬಂದು ಮುತ್ತಿಗೆ ಹಾಕಿದನು. ಆಗ ಕೃಷ್ಣನು ನಗರವನ್ನು ಬಿಟ್ಟು ಅತ್ಯಂತ ವೇಗದಿಂದ ಎಲ್ಲಿಗೋ ಓಡಿಹೋಗಲು ತೊಡಗಿದನು. ಅದನ್ನು ನೋಡಿ ಕೃಷ್ಣನು ತಪ್ಪಿಸಿಕೊಂಡು ಓಡುತ್ತಾನೆಂದುಕೊಂಡು ಕಾಲಯವನನು ಕೃಷ್ಣನನ್ನು ಓಡಿಸಿಕೊಂಡು ಹೋದನು. ಹೀಗೆ ಅವರಿಬ್ಬರೂ ಓಡುತ್ತಾ ಮುಚುಕುಂದನೆಂಬ ಮುನಿಯ ಆಶ್ರಮದ ಹತ್ತಿರ ಹೋದರು. ಕೃಷ್ಣನು ಆಶ್ರಮದೊಳಗೆ ಹೊಕ್ಕು ಎಲ್ಲಿಯೋ ಅಡಗಿಕೊಂಡನು. ಕಾಲಯವನನೂ ಆಶ್ರಮದೊಳಗೆ ಹೊಕ್ಕು ಕೃಷ್ಣನನ್ನು ಹುಡುಕುತ್ತ, ಮುಚುಕುಂದ ಮುನಿ ಧ್ಯಾನ ಮುದ್ರೆಯಲ್ಲಿರುವುದನ್ನರಿಯದೆ, ಕಾಲಿನಿಂದ ಒದೆದನು. ಕೂಡಲೇ ಎಚ್ಚರಕ್ಕೆ ಬಂದ ಮುನಿ ತನ್ನನ್ನು ತುಳಿದ ಕಾಲಯವನನನ್ನು ದುರುಗುಟ್ಟಿ ನೋಡಲು, ಅವನ ದೃಷ್ಟಿಯಲ್ಲಿ ಹೊರಟ ಕೋಪಾಗ್ನಿಯಿಂದ ಕಾಲಯವನನು ಸುಟ್ಟು ಬೂದಿಯಾದನು.

ಆ ಮೇಲೆ ಕೃಷ್ಣನು ಬಲರಾಮನೊಂದಿಗೆ ಮಧುರೆಯನ್ನು ಬಿಟ್ಟು ದ್ವಾರಕೆಗೆ ಹೋಗಿ ತಮ್ಮವ



ರನ್ನು ಸೇರಿಕೊಂಡನು. ಅಲ್ಲಿ ಉಗ್ರಸೇನನ ಪರಿಪಾಲನೆಯಲ್ಲಿರುವಾಗ, ಕೃಷ್ಣನಿಗೆ ರುಕ್ಮಿಣಿಯನ್ನು ಮದುವೆಯಾಗುವ ಯೋಗ ಉಂಟಾಯಿತು.

ರುಕ್ಮಿಣಿಯನ್ನು ಶಿಶುಪಾಲನಿಗೆ ಕೊಟ್ಟು ಮದುವೆ ಮಾಡಲು ಅವಳ ಅಣ್ಣ ರುಕ್ಮಿ ಎಲ್ಲಾ ಏರ್ಪಾಡುಗಳನ್ನೂ ಮಾಡಿದ್ದನು. ಅದು ರುಕ್ಮಿಣಿಗೆ ಇಷ್ಟವಿಲ್ಲದೆ, ಅವಳು ಕೃಷ್ಣನೇ ಪತಿಯಾಗಬೇಕೆಂದು ನೆನೆದುಕೊಂಡಿದ್ದಳು. ಇದನ್ನು ತಿಳಿದು ಕೃಷ್ಣನು ರಾಕ್ಷಸ ವಿವಾಹ ಪದ್ಧತಿಯಲ್ಲಿ ಅವಳನ್ನು ತಾನೇ ಮದುವೆಯಾದನು. ಇನ್ನೂ ಅನೇಕರನ್ನು ಕೃಷ್ಣನು ಮದುವೆಯಾದನು. ಜಾಂಬವತಿ, ಮಿತ್ರವಿಂದಾ, ಸತ್ಯಭಾಮೆ, ನಾಗ್ನಜಿತಿ, ಭದ್ರಾ, ಲಕ್ಷಣಾ, ಕಾಳಿಂದೀ ಇವರೆಲ್ಲ ಕೃಷ್ಣನ ಮುಖ್ಯ ಪತ್ನಿಯರು.

ಮುಂದೆ ರುಕ್ಮಿಣಿ ಪ್ರದ್ಯುಮ್ನನೆಂಬ ಒಬ್ಬ ಕುಮಾರನನ್ನು ಹಡೆದಳು. ಆ ಹುಡುಗನಿಗೆ ನಾಮಕರಣೋತ್ಸವವು ನಡೆದ ಅನಂತರ, ಶಂಬರನೆಂಬ ರಾಕ್ಷಸನು ಆ ಹಸುಕಂದನನ್ನು ಅಪಹರಿಸಿಕೊಂಡು ಹೋಗಿ ತನ್ನ ಮಗಳಾದ ಮಾಯಾವತಿಯ ಕೈಗೆ ಕೊಟ್ಟನು.

ಈ ಘಟನೆಯಿಂದ ಕೃಷ್ಣನಿಗೆ ದಿಕ್ಕು ತೋಚದಂತಾಯಿತು. ಅವನು ಜಗದಂಬೆಯನ್ನು ಧ್ಯಾನಿಸುತ್ತ ಹೀಗೆ ಪ್ರಾರ್ಥಿಸಿಕೊಂಡನು. "ತಾಯೀ! ಯಾವನೋ ದುಷ್ಟನು ಮಾಯಾ ರೂಪದಲ್ಲಿ ಅಂತಃಪುರದೊಳಗೆ ಪ್ರವೇಶಿಸಿ ತೊಟ್ಟಿಲು ಮಗುವನ್ನು ಕದ್ದುಕೊಂಡು ಹೋದನು. ಇದರಿಂದ ನನಗಿರುವ ಮರ್ಯಾದೆಯೇ ಹೋಯಿತು. ಅಮ್ಮಾ, ನಿನ್ನ ದಾಸನಾದ ನಾನು ಈ ದೀನಸ್ಥಿತಿಯಲ್ಲಿರುವುದನ್ನು ನೋಡಿದರೆ ನಿನಗೂ ನಾಚಿಕೆಯಿಲ್ಲವೆ? ನನ್ನ ಮನೆ ನಗರದ ಮಧ್ಯದಲ್ಲೇ ಇರುವಾಗ, ಸುತ್ತಲೂ ಬಲವಾದ ಕಾವಲಿರುವಾಗ ಮಗು ಮಾಯವಾಗಿ ಹೋಗುವುದೆಂದರೇನು? ಯಾರನ್ನೂ ದೂರಲಾರೆ! ಇದು ನನ್ನದೇ ಏನೋ ಪ್ರಾರಬ್ಧ! ನಾನು ಬೇರೆ ಊರಿಗೆ ಹೋದರೂ ಯಾದವರೆಲ್ಲಾ ಎಚ್ಚರದಲ್ಲಿ ನೋಡಿಕೊಳ್ಳುತ್ತಲೇ ಇರುತ್ತಾರೆ. ನಿನ್ನ ಮಾಯೆಯ ಬಲವಿಲ್ಲದಿದ್ದರೆ ಯಾವನಿಂದಲೂ ನನ್ನ ಮಗನನ್ನು ಕದ್ದೊಯ್ಯಲು ಸಾಧ್ಯವಿಲ್ಲ! ಅಮ್ಮಾ, ನನಗೆ ಮಗನನ್ನು ಕೊಟ್ಟು ಆನಂದಗೊಳಿಸಿದ ನೀನೇ ಈ ಮನೋವೇದನೆಯನ್ನು ಉಂಟುಮಾಡಬಹುದೆ? ನನ್ನ ಮಗನು ಮತ್ತೆ ಬರುವ ಹಾಗೆ ಮಾಡು."

ಹೀಗೆ ಪರಿತಪಿಸುವ ಕೃಷ್ಣನ ಮುಂದೆ ಮಹಾದೇವಿ ಸಾಕ್ಷಾತ್ಕರಿಸಿ, "ಕೃಷ್ಣಾ, ಎಲ್ಲದಕ್ಕೂ ಕಾರಣವಿದೆ. ಶಾಪದ ಕಾರಣದಿಂದ ನಿನ್ನ ಮಗನು ಶಂಬರನಿಂದ ಅಪಹರಿಸಲ್ಪಟ್ಟು ಅವನ ಮನೆಯಲ್ಲಿದ್ದಾನೆ. ಅವನು ಹದಿನಾರನೇ ವಯಸ್ಸಿನಲ್ಲಿ ಶಂಬರನನ್ನು ಕೊಂದು ನಿನ್ನ ಬಳಿಗೆ ತಿರುಗಿ ಬರುತ್ತಾನೆ. ಚಿಂತಿಸಬೇಡ" ಎಂದು ಹೇಳಿದಳು. ಇದರಿಂದ ರುಕ್ಮಿಣೀ ಕೃಷ್ಣರ ಚಿಂತೆ ಪರಿಹಾರವಾಯಿತು.

ನಾರಾಯಣಾಂಶದಿಂದ ಹುಟ್ಟಿದ ಕೃಷ್ಣನಿಗೆ ಗೊತ್ತಾಗದ ಹಾಗೆ ಅಂತಃಪುರದೊಳಗಿದ್ದ ಮಗುವನ್ನು ಹೇಗೆ ಅಪಹರಿಸಲು ಸಾಧ್ಯ? ಆದರೆ ಮಹಾದೇವಿಯ ಮಹಿಮೆ ತಿಳಿದವರಿಗೆ ಆಶ್ಚರ್ಯವೇನೂ ಆಗದು. ಮನುಷ್ಯರು ಮಾತ್ರವಲ್ಲ, ದೇವತೆಗಳೂ ದಾನವರೂ ಸಹ ಅವಳ ಮಾಯೆಯನ್ನು ಅಧಿಗಮಿಸುವವರಲ್ಲ. ಅರಣ್ಯದಲ್ಲಿ ತನಗೆ ಕಾಂಚನ ಮೃಗವೊಂದು ಗಂಟುಬಿದ್ದು, ತನ್ನ ಹೆಂಡತಿ ಅಪಹರಿಸಲ್ಪಡುವಳೆಂದು ತಿಳಿದುಕೊಳ್ಳಲು ರಾಮನಿಗೆ ಸಾಧ್ಯವಾಯಿತೆ? ಅವನಿಗೆ ತನ್ನ ತಂದೆಯ ಮರಣವನ್ನು ಯಾರೋ ಹೇಳಿದ ಹೊರತು ಗೊತ್ತಾಗಲಿಲ್ಲ. ಕಡೆಗೆ ಸೀತೆ ಇಂಥಲ್ಲಿ ಇರುವಳೆಂದು ಕೂಡಾ ರಾಮನಿಂದ ತಿಳಿದುಕೊಳ್ಳಲು ಸಾಧ್ಯವಾಗಲಿಲ್ಲ. ಯಾರಾರ ಸಹಾಯದಿಂದಲೋ ತಿಳಿಯಬೇಕಾಯಿತು. ತನ್ನ ಸ್ವಂತ ಮಕ್ಕಳಾದ ಕುಶಲವರನ್ನು ಕೂಡಾ ವಾಲ್ಮೀಕಿಯಿಂದಲೇ ರಾಮನು ತಿಳಿದನು.

ಮಾನವ ಶರೀರವನ್ನು ಧರಿಸಿದ ಮೇಲೆ ಮಾನವ ಧರ್ಮಗಳೂ ಅಂಟಿಕೊಂಡುಬಿಡುತ್ತವೆ. ಆದುದರಿಂದಲೇ ಕೃಷ್ಣನು ಹುಟ್ಟಿದ ಮರುಕ್ಷಣದಲ್ಲೇ ಕಂಸನ ಭಯದಿಂದ ಗೋಕುಲದಲ್ಲಿ ಅಡಗಿಕೊಂಡನು. ದೊಡ್ಡವನಾದ ಮೇಲೆ ಜರಾಸಂಧನ ಭಯದಿಂದ ದ್ವಾರಕೆಗೆ ಹೋಗಿ ತಲೆ ಮರೆಸಿಕೊಂಡನು. ಶಿಶುಪಾಲನ ಹೆಂಡತಿಯಾಗಬೇಕಾಗಿದ್ದವಳನ್ನು ಅಪಹರಿಸಿಕೊಂಡು ಹೋಗಿ ಮದುವೆ ಮಾಡಿಕೊಂಡದ್ದು ಕೂಡಾ ಕೃಷ್ಣನದು ತಪ್ಪೇ ಅಲ್ಲವೇ? ಇದೆಲ್ಲಾ ಮಾನವ ಧರ್ಮಕ್ಕೆ ಸಹಜವಾದ ಕೃತಿಗಳೇ. ಇಂತಹ ಎಷ್ಟೋ ಕೆಲಸಗಳನ್ನು ಕೃಷ್ಣನು ಮಾಡಿರುವನು.

ಹೆಂಡತಿಗೆ ವಿಧೇಯನಾಗಿ ಸತ್ಯಭಾಮೆ ಕೇಳಿದಳೆಂದು ಕೃಷ್ಣನು ಅಮರಾವತಿಯಿಂದ ಪಾರಿಜಾತ ವೃಕ್ಷವನ್ನು ಎತ್ತಿಕೊಂಡು ಬರಲು ಇಂದ್ರನೊಡನೆ ಯುದ್ಧಮಾಡಿದನು. ಜಾಂಬವತಿ ಮಕ್ಕಳು ಬೇಕೆಂದು ಬಯಸಿದುದಕ್ಕಾಗಿ ಕೃಷ್ಣನು ಉಪಮನ್ಯುವಿನ ಆಶ್ರಮದಲ್ಲಿ ತಪಸ್ಸು ಮಾಡಿದನು. ಅದಕ್ಕಾಗಿ ಪಾಶುಪತವೆಂಬ ವ್ರತ ಹಿಡಿದು ಶಿವನನ್ನು ಕುರಿತು ಕೃಷ್ಣನು ತಪಸ್ಸು ಮಾಡಿದರೆ, ಶಿವನು ಪಾರ್ವತೀ ಸಮೇತ ಪ್ರತ್ಯಕ್ಷನಾಗಿ, ಕೃಷ್ಣನ ಕೋರಿಕೆಯನ್ನು ತಿಳಿದುಕೊಂಡು, "ನಿನಗೆ ಹದಿನಾರು ಸಾವಿರದ ಐವತ್ತು ಮಂದಿ ಪತ್ನಿಯರಿದ್ದಾರೆ. ಒಬ್ಬೊಬ್ಬರಿಗೂ ಹತ್ತು ಹತ್ತು ಮಂದಿ ಮಕ್ಕಳು ಹುಟ್ಟುತ್ತಾರೆ. ನೀನು ನೂರು ವರ್ಷ ಬದುಕುವಿ" ಎಂದು ಆಶೀರ್ವಾದ ಮಾಡಿದನು. ತರುವಾಯ ಕೃಷ್ಣನು ಉಪಮನ್ಯುವಿಗೆ ನಮಸ್ಕರಿಸಿ ದ್ವಾರಕೆಗೆ ಹಿಂದಿರುಗಿ ಸುಖವಾಗಿದ್ದನು. ಆದುದರಿಂದ ಮಹಾದೇವಿಯ ಹೊರತು ಮಾಯೆಗೆ ಒಳಪಡದವರಾರೂ ಪ್ರಪಂಚದಲ್ಲಿಲ್ಲ.





# ಚೀನಾಂಬರಗಳು

ಮೂರು ಸಾವಿರ ವರ್ಷಗಳ ಹಿಂದೆ ಚೀನಾದೇಶವನ್ನು ಆಳಿಕೊಂಡಿದ್ದ ಚಕ್ರವರ್ತಿಯೊಬ್ಬನು, ಪರಮ ಸುಂದರಿಯಾದ ಹುಡುಗಿಯೊಬ್ಬಳನ್ನು ಮದುವೆ ಮಾಡಿಕೊಂಡನು. ಅವಳ ಹೆಸರು ಸೀಲಿಂಗ್ ಷೀ.

ಮದುವೆಯಾದಾಗ ಸೀಲಿಂಗ್‌ಷೀಯ ವಯಸ್ಸು ಹದಿನಾಲ್ಕು ವರ್ಷಗಳು. ಚಕ್ರವರ್ತಿಗೆ ಅವಳ ಮೇಲೆ ಅಪಾರ ಪ್ರೇಮ. ಪಟ್ಟದ ರಾಣಿಯಾದ ಸೀಲಿಂಗ್‌ಷೀಗೆ ಯಾವ ಕೊರತೆಯೂ ಇಲ್ಲದಂತೆ ನೋಡಿಕೊಳ್ಳುತ್ತಿದ್ದನು. ದಿನವಿಡೀ ಅವಳಿಗೆ ವಿನೋದವನ್ನುಂಟು ಮಾಡಿ ಸಂತೋಷಗೊಳಿಸಲು ಗಾಯಕರೂ, ನರ್ತಕರೂ, ಚಿತ್ರ ವಿಚಿತ್ರವಾದ ಆಟಗಳನ್ನು ತೋರಿಸುವವರೂ ಇರುತ್ತಿದ್ದರು.

ಇಷ್ಟೆಲ್ಲಾ ಇದ್ದುಕೂಡಾ ಸೀಲಿಂಗ್‌ಷೀಯ ಮುಖದಲ್ಲಿ ಏನೋ ಒಂದು ಚಿಂತೆಯ ಮಸಕುಗೆರೆ ಇದ್ದೇ ಇದ್ದಿತು. ಕೆಲವುಸಾರಿ ಕಣ್ಣೀರು ತುಂಬುತ್ತಿದ್ದಿತು. ಅವಳ ದುಃಖವನ್ನು ನಿವಾರಣೆಮಾಡಲು ಯಾರು ಯಾರೋ ಏನೇನೋ ಪ್ರಯತ್ನಮಾಡುತ್ತಿದ್ದರು. ಆದರಿಂದೇನೂ ಪ್ರಯೋಜನವಾಗಲಿಲ್ಲ. ಚಕ್ರವರ್ತಿ ಹಿರಿಯರೊಂದಿಗೆ ಅವಳ ಚಿಂತೆಗೆ ಕಾರಣವೇನಿರಬಹುದೆಂದು ಆಲೋಚನೆ ಮಾಡಿದನು. "ಚಿಕ್ಕ ಹುಡುಗಿ. ಹುಟ್ಟಿದಂದಿನಿಂದ ತಂದೆತಾಯಿಗಳನ್ನು ಬಿಟ್ಟು ಇದ್ದವಳಲ್ಲ. ದೂರದಲ್ಲಿರುವ ತನ್ನ ತಾಯಿ ತಂದೆ, ಅಣ್ಣ ತಮ್ಮ ಮೊದಲಾದವರನ್ನು ನೆನೆದುಕೊಂಡು ಚಿಂತಿಸುತ್ತಾಳೆ. ಕ್ರಮೇಣ ಸರಿಹೋಗುತ್ತೆ" ಎಂದರು ಕೆಲವರು.

ಒಂದು ದಿನ ತನ್ನ ಪಟ್ಟ ಮಹಿಷಿ ಉದ್ಯಾನವನದಲ್ಲಿ ಚಿಂತಿಸುತ್ತಾ ಕುಳಿತಿರುವಳೆಂಬ ವಾರ್ತೆ ಚಕ್ರವರ್ತಿಗೆ ಗೊತ್ತಾಯಿತು. ಅವನು ತನ್ನ ಇಬ್ಬರು ಮಂತ್ರಿಗಳೊಂದಿಗೆ ಉದ್ಯಾನವನಕ್ಕೆ ಹೊರಟನು. ಅಲ್ಲೊಂದು ಉಪ್ಪುನೇರಳೆ ಮರದ ನೆರಳಿನಲ್ಲಿ ಕುಳಿತಿದ್ದ ತನ್ನ ರಾಣಿಯ ಬಳಿಗೆ ಹೋಗಿ "ರಾಣೀ, ನಿನ್ನ ಏಳೆಗಲ್ಲಗಳು ಒದ್ದೆಯಾಗಿವೆಯಲ್ಲಾ? ಆರೋಗ್ಯ ಚೆನ್ನಾಗಿಲ್ಲವೆ? ತೌರು ಮನೆಗೆ ಹೋಗ ಬೇಕೆಂದಿದೆಯೇ? ಮುಚ್ಚು ಮರೆ ಮಾಡದೆ ಹೇಳು" ಎಂದನು.

"ಸ್ವಾಮಿ! ನನಗೆ ಯಾವ ಕೊರತೆಯೂ ಇಲ್ಲ. ತೌರು ಮನೆಗಿಂತಲೂ ಇಲ್ಲಿ ಸುಖವಾಗಿದ್ದೇನೆ. ನನ್ನ ವಿಷಯದಲ್ಲಿ ನೀವೇನೂ ಚಿಂತೆ ಹಚ್ಚಿಕೊಳ್ಳಬಾರದು. ಯಾಕೋ ಉಲ್ಲಾಸ ಬರೋದಿಲ್ಲಾನ್ನುತ್ತೆ. ಅಷ್ಟೇ.

೩೫ ವರ್ಷಗಳ ಹಿಂದಿನ ಚಂದಮಾಮ ಕಥೆ



ಬೇಗದಲ್ಲೇ ಸರಿಯಾದೇನು" ಎಂದಳು ಸೀಲಿಂಗ್ ಷೀ.

ಮಹಾರಾಜನು ಮಂತ್ರಿಗಳ ಕಡೆಗೆ ನೋಡಿ, "ನೀವು ಬೇಗನೇ ಮಹಾರಾಣಿಗೆ ಉಲ್ಲಾಸವಾಗುವ ಹಾಗೆ ಏನಾದರೂ ಆಲೋಚನೆಮಾಡಿ ಹೇಳಿರಿ" ಎಂದು ಹೇಳಿ ಹೊರಟುಹೋದನು. ಮಂತ್ರಿಗಳು ತಮ್ಮೊಳಗೆ ಮಾತಾಡಿಕೊಳ್ಳುತ್ತ ಹೋದರು.

ಅನಂತರ ಪರಿಚಾರಿಕೆಯರು ಚಹಾ ಪಾನೀಯವನ್ನು ತಂದು ಮಹಾರಾಣಿಯ ಮುಂದೆ ಇಟ್ಟರು. ಆವಳು ತನ್ನ ಆಚಾರದಂತೆ ತಾನೇ ಸ್ವಂತವಾಗಿ ಚಹಾ ಪಾನೀಯಕ್ಕೆ ಹಾಲು ಬೆರೆಸಿ ಹಾಡುಗಾರರಿಗೂ, ಆಟಗಾರರಿಗೂ ಲೋಟಗಳಲ್ಲಿ ಹಾಕಿ ಕೊಟ್ಟು, ತನ್ನ ಲೋಟವನ್ನು ತನ್ನ ಮುಂದೆ ಇಟ್ಟುಕೊಂಡಳು. ಅದು ತುಂಬಾ ಬಿಸಿಯಾಗಿದ್ದುದರಿಂದ, ಕೂಡಲೇ ತೆಗೆದು ಕುಡಿಯಲಿಲ್ಲ.

ಆ ಸಮಯದಲ್ಲಿ ಮರದ ಮೇಲಿನಿಂದ ಏನೋ ಒಂದು ವಸ್ತು ಮಹಾರಾಣಿಯ ಚಹಾ ಲೋಟದೊಳಗೆ ತುಳುಕ್ಕೆಂದು ಬಿತ್ತು. ಚಹಾ ನೀರು ಹಾರಿ ಮಹಾರಾಣಿಯ ಅಮೂಲ್ಯವಾದ ಬಟ್ಟೆಗಳ ಮೇಲೆ ಜಿನುಗಿತು. ಪರಿಚಾರಿಕೆಯರು ನೊಂದುಕೊಳ್ಳುತ್ತ ಅವಸರವಾಗಿ ಮುಂದೆ ಬಂದರು.

"ಇರಲಿ ಬಿಡಿ. ನನ್ನ ಬಟ್ಟೆಗೇನೂ ಅವಸರವಿಲ್ಲ. ಲೋಟಿಗೆ ಬಿದ್ದ ವಸ್ತು ಎಂಥದೆಂದು ನೋಡಿ" ಎಂದಳು ಸೀಲಿಂಗ್ ಷೀ.

ಪರಿಚಾರಿಕೆಯರು ಚಹಾ ಪಾನೀಯದೊಳಗಿನಿಂದ ಚಿಕ್ಕದೊಂದು ದಾರದ ಉಂಡೆಯಂಥ ಪದಾರ್ಥವನ್ನು ತಗೆದು ಮಹಾರಾಣಿಯ ಅಂಗೈಯಲ್ಲಿಟ್ಟರು. ಅದು ಬೇರೇನೂ ಅಲ್ಲ; ಯಾವುದೋ ಹುಳುಗಳು ಮರದ ಮೇಲೆ ಮೊಟ್ಟೆಯಿಡಲು ಕಟ್ಟಿಕೊಂಡ ಸಣ್ಣಗಿನ ಉಂಡೆಯಂಥ ಗೂಡು. ಅಂತಹ ಉಂಡೆ ಗೂಡುಗಳು ವೃಕ್ಷದ ಮೇಲೆ ಇನ್ನೂ ಅನೇಕವಾಗಿ ಅಂಟಿಕೊಂಡಿದ್ದುವು.

ಚಹಾ ನೀರಿನಲ್ಲಿ ಬಿದ್ದು ನೆನೆದ ಆ ಉಂಡೆ ಗೂಡಿನ ಚೆಂದವನ್ನು ನೋಡುತ್ತಿದ್ದ ರಾಣಿಗೆ ಅದರಲ್ಲಿ ಏನೋ ಒಂದು ವಿಶೇಷವು ಕಾಣ ತೊಡಗಿತು. ನೆನೆದುದರಿಂದ ಬಿಡಿಸಲ್ಪಟ್ಟ ಹೊಳೆಯುವ ರೋಮಗಳು ಥಳಥಳಿಸಿದುವು. ಬೆರಳಿನಿಂದ ಬಿಡಿಸಲು ನೋಡಿದಳು. ರೋಮಗಳಲ್ಲ, ದಾರವೇ ಬೆರಳಿನಲ್ಲಿ ಏಳ ತೊಡಗಿತು.

"ಆಹಾ! ಇದೇ ದಾರವಾದರೆ ಇದರಿಂದ ನೇದ ವಸ್ತ್ರ ಎಷ್ಟು ಸುಂದರವಾಗಿರುತ್ತೆ!" ಎಂದುಕೊಂಡಳು ಸೀಲಿಂಗ್ ಷೀ.

ಮರುಕ್ಷಣದಲ್ಲಿ ಮಿಂಚಿನಂತೆ ಒಂದು ಆಲೋಚನೆ ತೋರಿ ಅವಳ ಮುಖವು ಪ್ರಕಾಶಮಾನವಾಯಿತು. ಈ ದಾರವು ತುಂಬಾ ಸಣ್ಣನಾಗಿದ್ದರೂ ಸುಲಭದಲ್ಲಿ ತುಂಡಾಗುವುದಿಲ್ಲ. ಅಲ್ಲದೆ ಈ ಒಂದು ಚಿಕ್ಕ ಉಂಡೆಯಲ್ಲೇ ಎಷ್ಟೋ ನೂರು ಗಜಗಳಷ್ಟು ದಾರವಿದೆಯಲ್ಲಾ! ಇದನ್ನು ತೆಗೆದು ಬೇರೆ ಬೇರೆಯಾಗಿ ಸುಂದಿಸುತ್ತಿ ಬೇಕಾದ ಹಾಗೆ ದಾರ ತಯಾರಿಸಿ

ಮಗ್ಗದಲ್ಲಿ ನೇದರೆ, ಎಷ್ಟು ಸುಂದರವಾದ ವಸ್ತ್ರ ತಯಾರಾಗುತ್ತದೋ! ಪ್ರಪಂಚದಲ್ಲಿ ಯಾರೂ ಎಂದಿಗೂ ನೋಡಿರದಂತಹ ಅದ್ಭುತವಾದ ವಸ್ತ್ರ!

ಈ ಆಲೋಚನೆ ಬಂದ ಕೂಡಲೇ ಸೀಲಿಂಗ್ ಷೀ ರಾಣಿಗೆ ಅಂಟಿಕೊಂಡ ಚಿಂತೆಯ ರೇಖೆ ಮಟಮಾಯ ವಾಯಿತು. ಅವಳು ಅತ್ಯುತ್ಸಾಹದಿಂದ ಎದ್ದು ಪರಿಚಾರಿಕೆಯರನ್ನು ಕರೆದು, ತನ್ನ ಕೈಯಲ್ಲಿದ್ದ ಉಂಡೆಯನ್ನು ಬಿಡಿಸಿ ದಾರ ತೆಗೆದು ಸುತ್ತಲು ಹೇಳಿದಳು. ಅವರು ರಾಣಿ ಹೇಳಿ ಕೊಟ್ಟ ಹಾಗೆಯೇ ಉಂಡೆಯಿಂದ ಸಣ್ಣಗಿನ ಹೊಳೆಯುವ ದಾರವನ್ನು ಬಿಡಿಸಿ ಕಡ್ಡಿಗಳಿಗೆ ಸುಂದ ತೊಡಗಿದರು.

"ಇಂತಹ ಎಷ್ಟು ದಾರವಾದರೆ ವಸ್ತ್ರವಾದೀತು? ನೀವೆಲ್ಲರೂ ಕೂಡಿ ಮರದ ಮೇಲಿದ್ದ ಎಲ್ಲಾ ಉಂಡೆ ಗೂಡುಗಳನ್ನೂ ತೆಗೆದು ತಂದು ಚಹಾ ನೀರಿಗೆ ಹಾಕಿರಿ." ಎಂದಳು ರಾಣಿ.

ಮತ್ತೇನು? ಕೆಲಸವೇ ಕೆಲಸ. ಯಾರಿಗೂ ಕ್ಷಣವೂ ಪುರುಸೊತ್ತಿಲ್ಲ. ಅದುವರೆಗೆ ಯಾವ ಕೆಲಸವೂ ಇಲ್ಲದೆ ಕ್ಷಣವನ್ನು ಯುಗದಂತೆ ಕಳೆಯುತ್ತಿದ್ದ ಮಹಾರಾಣಿಗೆ ಈಗ ಗಂಟೆಗಳು ಕ್ಷಣಗಳ ಹಾಗೆ ಸಾಗುತ್ತಿದ್ದುವು. ಸೂರ್ಯಾಸ್ತಮಾನವಾಗುವುದರೊಳಗೆ ಅನೇಕ ದಾರಗಳ ಹಿಡಿಕೆಗಳು ತಯಾರಾದುವು.

ರಾಣಿಯ ಆಜ್ಞೆಯಂತೆ ಬಡಗಿಗಳು ಬಂದರು. ಅವಳು ಬಡಗಿಯರಿಗೆ ಆ ದಾರವನ್ನು ತೋರಿಸಿ, "ನೋಡಿದಿರಾ ಈ ದಾರವನ್ನು! ಇಷ್ಟೊಂದು ಸಣ್ಣಗಿನ ದಾರಗಳಿಂದ ವಸ್ತ್ರ ನೇಯಲು ಸರಿಯಾದ ಮಗ್ಗವನ್ನು ತಯಾರಿಸಿ ಕೊಡಬೇಕು. ರಾತ್ರಿ ಪೂರಾ ಕೆಲಸ ಮಾಡಿ ಬೆಳಗಾಗುವಾಗ ನನ್ನ ಕೋಣೆಯಲ್ಲಿ ಮಗ್ಗ ಸಿದ್ಧವಾಗಿರಬೇಕು." ಎಂದಳು. "ಹಾಗೆಯೇ ಆಗಲಮ್ಮಾ!" ಎಂದು ಬಡಗಿಗಳು ಕೂಡಲೇ ಕೆಲಸ ಪ್ರಾರಂಭಿಸಿದರು.

ಇದಾವುದೂ ತಿಳಿಯದ ಚಕ್ರವರ್ತಿ ಮರುದಿನ ತನ್ನ ಮಂತ್ರಿಗಳನ್ನು ಕರೆದು, "ಪಟ್ಟದ ರಾಣಿಯ ಮನಸ್ಸು ಉಲ್ಲಾಸವಾಗುವ ಹಾಗೆ ಏನು ಹೊಸ ಆಲೋಚನೆ ಮಾಡಿದಿರಿ?" ಎಂದು ಕೇಳಿದನು.





"ಆಲೋಚನೆ ಮಾಡಿದ್ದೇವೆ. ಸುಂದರವಾದ ನವಿಲನ್ನು ತಂದು ನಮ್ಮ ಉದ್ಯಾನದಲ್ಲಿ ವಿಹರಿಸಲು ಬಿಟ್ಟರೆ, ದೇವಿಯವರು ಅದರ ನಾಟ್ಯವನ್ನು ನೋಡಿದರೆ, ಬಿಡಿಸಲ್ಪಟ್ಟ ಅದರ ಗರಿಗಳ ಚೆಂದವನ್ನು ನೋಡಿದರೆ..." ಎಂದು ಒಬ್ಬ ಮಂತ್ರಿ ಹೇಳುತ್ತಿರಲು, ಚಕ್ರವರ್ತಿ ಅದರಲ್ಲೇನೂ ಸ್ವಾರಸ್ಯವಿಲ್ಲವೆಂಬಂತೆ ಎರಡನೇ ಮಂತ್ರಿಯನ್ನು ನೋಡಿದನು.

"ನಮ್ಮ ಉದ್ಯಾನವನದಲ್ಲಿ ಜಲಕ್ರೀಡೆಯಾಡಲು ಚಿಕ್ಕದೊಂದು ಸುಂದರವಾದ ತಾವರೆ ಕೊಳವನ್ನು ಏರ್ಪಡಿಸಿ ಬಿಟ್ಟರೆ ಮಹಾರಾಣಿಯವರು ಅದರಲ್ಲಿ ಈಜುತ್ತ..." ಎಂದು ಎರಡನೇ ಮಂತ್ರಿ ಹೇಳಲು,

"ಅವೆಲ್ಲಾ ಹಳೆಯದೇ! ಹೊಸತೇನೂ ನಿಮಗೆ ತೋರಲಿಲ್ಲವೆಂದಾಯಿತು." ಎಂದು ಚಕ್ರವರ್ತಿ ರಾಣಿಯನ್ನು ಕರೆಯಲು ಆಜ್ಞೆ ಮಾಡಿದನು.

ಭಟರು ಓಡಿಹೋಗಿ ಹಿಂದಿರುಗಿ ಬಂದು, "ಪ್ರಭುಗಳೇ, ಮಹಾರಾಣಿಯವರು ಇನ್ನೂ ತಮ್ಮ ಕೋಣೆಯಿಂದ ಹೊರಗೆ ಬರಲಿಲ್ಲ." ಎಂದು ವಿನಂತಿಸಿದರು.

"ಅಷ್ಟು ಹೊತ್ತೇರಿದರೂ ಇನ್ನೂ ಎದ್ದು ಹೊರಗೆ ಬರಲಿಲ್ಲವೆ? ಆಶ್ಚರ್ಯವಾಗಿದೆಯಲ್ಲಾ!" ಎಂದನು ಚಕ್ರವರ್ತಿ. ಚಿಕ್ಕಪ್ರಾಯದ ತನ್ನ ಪತ್ನಿಗೆ ಏನು ಅನಾರೋಗ್ಯವೋ ಎಂದು ಆಂದೋಳನೆಗೊಂಡು, ತಾನೇ ಎದ್ದು ರಾಣಿಯ ಕೋಣೆಯೊಳಗೆ ಹೋದವನಿಗೆ, ಅಲ್ಲಿಯ ದೃಶ್ಯವನ್ನು ನೋಡಿ ಆಶ್ಚರ್ಯಾನಂದಗಳಿಂದ ಉಸಿರು ಸಿಕ್ಕಿಕೊಂಡಿತು.

ಮಹಾರಾಣಿ ಎಷ್ಟೊಂದು ದುಃಖದಲ್ಲಿರುವಳೋ, ತಾನು ಅವಳನ್ನು ಹೇಗೆ ಸಮಾಧಾನಪಡಿಸುವೆನೋ ಎಂದು ಕೊಂಡಿದ್ದ ಚಕ್ರವರ್ತಿ, ಎಂದೂ ಇಲ್ಲದ ಅವಳ ಆನಂದದ ಮುಖವನ್ನು ನೋಡಿ, ಅವಳ ಚಟುವಟಿಕೆಯನ್ನು ನೋಡಿ ದಂಗುಬಡಿದು ನಿಂತನು. ಒಂದು ವಿಚಿತ್ರವಾದ ಮಗ್ಗದ ಮುಂದೆ ಕುಳಿತುಕೊಂಡು, ಎಂದೂ ಕಾಣದ ಕೇಳದ ಸುಂದರವಾದ ದಾರಗಳಿಂದ ಜಗಜಗನೆ ಹೊಳೆಯುವ ನಾಜೂಕಾದ ವಸ್ತ್ರವನ್ನು ನೇಯುತ್ತಿದ್ದಾಳೆ ಮಹಾರಾಣಿ ಸೀಲಿಂಗ್ ಷೀ.

ಅವಳು ತಲೆಯೆತ್ತಿ ಅರಳ್ಮೊಗದಿಂದ ಚಕ್ರವರ್ತಿಯನ್ನು ನೋಡಿದಳು. ಆ ಕಣ್ಣುಗಳಲ್ಲಿ ಆನಂದವು ತೇಲುತ್ತಿದ್ದುವು, ತುಟಿಗಳಲ್ಲಿ ಮುಗುಳ್ನಗು.

"ಮಹಾ ಪ್ರಭು! ಇಷ್ಟು ದಿನ ನಾನು ಏಕೋ ನನಗೇ ತಿಳಿಯದೆ, ಚಿಂತಿಸುತ್ತಾ ಇದ್ದು ನಿಮಗೂ ತುಂಬಾ ದುಃಖವನ್ನುಂಟು ಮಾಡಿದೆ. ಅದಕ್ಕೆ ಪರಿಹಾರವಾಗಿ ನನಗೀಗ ಆನಂದ ಉಕ್ಕುತ್ತಾ ಇದೆ, ಇಗೋ ನೋಡಿರಿ! ನಿಮಗಾಗಿ ಈ ದೇವತಾ ವಸ್ತ್ರವನ್ನು ನೇದು ಕೊಡುತ್ತೇನೆ. ಕೋಪಿಸಲಾರಿರಷ್ಟೆ?" ಎಂದಳು ಸೀಲಿಂಗ್ ಷೀ.

"ಕೋಪವೇ? ಇಷ್ಟೊಂದು ಅಪೂರ್ವವಾದ ವಸ್ತ್ರವನ್ನು ನಿನ್ನಿಂದ ಬಹುಮಾನ ಪಡೆಯುವ ನಾನು ಕೋಪಿಸುವುದುಂಟೆ? ನನ್ನ ರಾಣಿ ಮಾನವಿಯಲ್ಲ,

ದೇವತೆಯೇ ಆದರೆ ನನಗಿಂತ ಹೆಚ್ಚು ಸಂತೋಷ ಪಡುವವರು ಬೇರೆಯಾರಿದ್ದಾರು?" ಎಂದನು ಚಕ್ರವರ್ತಿ.

ಸೀಲಿಂಗ್ ಷೀ ಗಂಡನೊಂದಿಗೆ ನಡೆದ ಸಂಗತಿ ಏನೆಂಬುದನ್ನೆಲ್ಲಾ ಹೇಳಿದಳು. ಆಗ ತಾನೇ ಚಕ್ರವರ್ತಿಗೆ ತನ್ನ ಹೆಂಡತಿಯು ಇಷ್ಟು ದಿನಗಳ ಚಿಂತೆಗೆ ಕಾರಣ ತಿಳಿಯಿತು. ಅವಳು ತೌರು ಮನೆಯಲ್ಲಿ ಏನೋ ಒಂದು ಕೆಲಸ ಮಾಡಿ ಕೊಂಡಿದ್ದವಳು. ಚಕ್ರವರ್ತಿಯು ಕೈ ಹಿಡಿದ ಮೇಲೆ ಕೆಲಸ ಮಾಡುವ ಸಂದರ್ಭವಿಲ್ಲದೆ, ಎಷ್ಟೆಲ್ಲ ಸುಖ ಸೌಕರ್ಯಗಳಿದ್ದರೂ ಅವಳಿಗೇ ಅರಿಯದಂತಹ ಚಿಂತೆ ಒಳಗೇ ಇದ್ದಿತು. ಈಗಿನ ಘಟನೆ ಅದಕ್ಕೆ ಪರಿಹಾರವೂ ಆಗಿ ಅವಳಲ್ಲಿ ಸಂತೋಷ ಮೂಡಿದೆ. ಚಕ್ರವರ್ತಿಯ ಪತ್ನಿಯಾಗಿ ಸ್ವತಃ ವಸ್ತ್ರ ನೇಯುವುದು ಭಾವ್ಯವಲ್ಲವೆಂತಲೇ ಅಂತಃಪುರದಲ್ಲಿ ರಹಸ್ಯವಾಗಿ ಮಗ್ಗ ಹಾಕಿಸಿ ಕೊಂಡಿದ್ದಾಳೆ ಕಳ್ಳಿ!

"ಪ್ರಿಯಳೇ, ಈ ಕೆಲಸದಿಂದ ನಿನಗೆ ಸಂತೋಷವಾಗುವುದಾದರೆ ನನಗೇನೂ ಅಭ್ಯಂತರವಿಲ್ಲ. ನಿನ್ನನ್ನು ಸಂತೋಷ ಪಡಿಸಿದವರಿಗೆ ನಾನು ರಾಜ್ಯವನ್ನೇ ಕೊಡಲು ತಯಾರಾಗಿದ್ದೇನೆ. ನಿನ್ನ ಚಿಂತೆ ತೊಲಗಿದ್ದೇ ಬಹು ದೊಡ್ಡ ನಿಧಿ ನನಗೆ!" ಎಂದನು ಚಕ್ರವರ್ತಿ. "ಹಾಗಾದರೆ ಮಹಾಪ್ರಭು! ನನ್ನದೊಂದು ಕೋರಿಕೆಯನ್ನು ನೆರವೇರಿಸಿ ಕೊಡಿ" ಎಂದಳು. ಸೀಲಿಂಗ್ ಷೀ. "ಕೇಳು" ಎಂದನು ಚಕ್ರವರ್ತಿ "ನಮ್ಮ ತೋಟದಲ್ಲಿ ಸಾವಿರ ಉಪ್ಪುನೇರಳೆ ಮರಗಳನ್ನು ಹಾಕಿಸಿ ಕೊಡಿ." ಎಂದಳು ಸೀಲಿಂಗ್ ಷೀ, ಚಕ್ರವರ್ತಿ ಅವಳ ಕೋರಿಕೆಯನ್ನು ನೆರವೇರಿಸಿ ಕೊಟ್ಟನು. ಅವುಗಳ ತುಂಬಾ ಪಟ್ಟೇ ಹುಳುಗಳು ಗೂಡುಕಟ್ಟಿದುವು.

ಪ್ರಪಂಚದಲ್ಲಿ ಮೊತ್ತ ಮೊದಲು ಪಟ್ಟೇ ವಸ್ತ್ರಗಳನ್ನು ನೇದವಳು ಸೀಲಿಂಗ್ ಷೀ. ಈಗಲೂ ಚೀನಾ ಭಾಷೆಯಲ್ಲಿ "ಷೀ" ಅಂದರೆ ಪಟ್ಟೆ. ಅವಳ ಅನಂತರ ಚೀನಾ ದೇಶದ ಮಹಾರಾಣಿಗಳು ಅವಳು ಏರ್ಪಡಿಸಿಕೊಟ್ಟ ಸಂಪ್ರದಾಯವನ್ನನುಸರಿಸಿ, ಪ್ರತಿ ವರ್ಷವೂ ಒಂದು ದಿನ ಪಟ್ಟೆ ಹುಳುಗಳಿಗೆ ತಮ್ಮ ಕೈಗಳಿಂದ ಆಹಾರ ನೀಡುವ ಹಬ್ಬವನ್ನು ಆಚರಿಸಿ ಕೊಂಡು ಬಂದರು.

ಕಾಲಕ್ರಮದಲ್ಲಿ ಪಟ್ಟೆ ವಸ್ತ್ರಗಳ ರಹಸ್ಯವು ಚೀನಾದಿಂದ ಬೇರೆ ದೇಶಗಳಿಗೆ ಹರಡಿತು. ಆದುದರಿಂದಲೇ ಪಟ್ಟೆ ವಸ್ತ್ರಗಳಿಗೆ ಪೂರ್ವಕಾಲದಿಂದಲೂ ಚೀನಾಂಬರಗಳೆಂಬ ಹೆಸರು ವಾಡಿಕೆಗೆ ಬಂತು. ಉಳಿದ ದೇಶಗಲ್ಲಿ ಪಟ್ಟೆಯ ಬಟ್ಟೆಗಳು ತಯಾರಾದರೂ ಸಹ ಚೀನಾ ದೇಶದ ಪಟ್ಟೇ ಬಟ್ಟೆಗಳಿಗೆ ಗಣ್ಯತೆ ಹೆಚ್ಚು. ಅದನ್ನು ಚೀನೀ ಚೀನಾಂಬರವೆಂಬ ವಿಶೇಷಣದೊಂದಿಗೆ ಉಚ್ಚರಿಸುತ್ತಾರೆ.



## ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೫

### ಗೆದ್ದ ಶೀರ್ಷಿಕೆಗಳು ೧೯೮೦ ಜನವರಿ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ



Ravindra S. Kamboj



Prabu Sankar

★ ಮೇಲಿನ ಫೋಟೋಗಳಿಗೆ ಸರಿಹೊಂದುವಂತೆ ಒಂದು ವಾಕ್ಯದಲ್ಲಾಗಲೀ, ಸಂಬಂಧಿಸಿದಂತಿರುವ ಎರಡು ವಾಕ್ಯಗಳಲ್ಲಾಗಲೀ ಶೀರ್ಷಿಕೆ ಬರೆಯಬೇಕು.

★ ನವಂಬರ್ ೧೫ ರೊಳಗೆ ಶೀರ್ಷಿಕೆಗಳು ನಮಗೆ ತಲಪಬೇಕು. ಆಮೇಲೆ ಬಂದ ಶೀರ್ಷಿಕೆಗಳು ಪರಿಶೀಲಿಸಲ್ಪಡುವುದಿಲ್ಲ.

★ ನಮಗೆ ಬಂದ ಶೀರ್ಷಿಕೆಗಳಲ್ಲಿ ಅತ್ಯುತ್ತಮವಾದ ಒಂದು ಜತೆಗೆ ರೂಪ್ಾಯ ೨೫ ಬಹುಮಾನ.

★ ಶೀರ್ಷಿಕೆಗಳನ್ನು ಪೋಸ್ಟುಕಾರ್ಡಿನಲ್ಲೇ ಬರೆಯಬೇಕು. ಆದರಲ್ಲಿ ಬೇರೆ ವಿಷಯ ಬರೆಯಬಾರದು. ವಿಳಾಸ: ಚಂದಮಾಮ ಫೋಟೋ ಶೀರ್ಷಿಕೆಯ ಸ್ಪರ್ಧೆ, ಮದರಾಸು-೬೦೦೦೨೬

---

### ಸೆಪ್ಟೆಂಬರ್ ಸ್ಪರ್ಧೆಯ ಫಲಿತಾಂಶ:

ಮೊದಲನೇ ಫೋಟೋ: **ಕಲ್ಲಿಗಲ್ಲ ಈ ಪೂಜೆ**

ಎರಡನೇ ಫೋಟೋ: **ತನಗಲ್ಲ ಈ ತಪಸ್ಸು**

ಕಳುಹಿಸಿದವರು: **ಬಿ. ಕೆ. ವಿಠಲ,**

ಚಿಲಗೂರು, ಹೊಸದುರ್ಗ, ಚಿತ್ರದುರ್ಗ ಜಿಲ್ಲೆ.

Printed by B. V. REDDI at Prasad Process Private Ltd., and Published by B. VISWANATHA REDDI for CHANDAMAMA CHILDREN'S TRUST FUND (Prop. of Chandamama Publications) 2 & 3, Arcot Road, Madras-600 026 (India). Controlling Editor: NAGI REDDI.

# ಚಿಕ್ಕ ಮಕ್ಕಳು
## ಪ್ರೀತಿ ಬಯಸಿವೆ, ಪ್ರೀತಿ ಪಡೆಯುತ್ತ ಮತ್ತೆ ಬೆಳೆದಿವೆ




ಪ್ರೀತಿಯ ಇನ್ನೊಂದು ಹೆಸರು

**ಪಾರ್ಲೆ ಗ್ಲುಕೋ**
**ಅಪೂರ್ವವಾದ ರುಚಿ**
**ತುಂಬಿ ತುಳುಕುವ ಶಕ್ತಿ**

ಹಾಲು, ಗೋಧಿ, ಸಕ್ಕರೆ ಮತ್ತು ಗ್ಲುಕೋಸ್‌ಗಳ
ಹಿತಕಾರೀ ಸತ್ವಗಳಿಂದ ಸಮೃದ್ಧವಾಗಿವೆ.



ವರ್ಲ್ಡ್ ಸಿಲೆಕ್ಷನ್
ಅವಾರ್ಡ್‌ನ ವಿಜಯಿ

ಪಾರ್ಲೆ
ಗ್ಲುಕೋ
ಭಾರತದ ಅತ್ಯಧಿಕ ಮಾರಾಟವಾಗುವ ಬಿಸ್ಕಿಟ್

everest/79/PP/159-kn



# ಕರಡಿಕೆಂಗಣ್ಣ

## ೧೬

[ಕರಡಿಕೆಂಗಣ್ಣನು ದುರ್ಮುಖರಾಜನನ್ನು ಕ್ಷಮಿಸಿ ಮಾಯಾಮರ್ಕಟನನ್ನು ಹುಡುಕಲು ತೊಡಗಿದನು. ಆ ಮರ್ಕಟನು ಜೀವಗುಪ್ತನ ಹತ್ತಿರ ಮಾತಾಡುವನೆಂದು ಅಂಗರಕ್ಷಕರಿಂದ ತಿಳಿಯಿತು. ಕಾಳೀವರ್ಮನೂ ಕರಡಿ ಕೆಂಗಣ್ಣನೂ ಅತ್ತ ಕಡೆಗೆ ಹೊರಟರು. ಇಷ್ಟರಲ್ಲಿ ಉಗ್ರದಂಡ ರಾಕ್ಷಸನು ಮಾಯಾಮರ್ಕಟನನ್ನು ಗದೆಯಿಂದ ಹೊಡೆಯಲು, ಆ ಏಟು ಮಾಯಾಮರ್ಕಟನ ಕುದುರೆಗೆ ತಾಗಿತು.]

ರಾಕ್ಷಸನು ತನ್ನ ಮೇಲೆ ಗದೆಯನ್ನೆತ್ತುತ್ತಲೇ ಮರ್ಕಟನು ಮಿಂಚಿನ ವೇಗದಲ್ಲಿ ಕುದುರೆಯ ಮೇಲಿಂದ ಮೇಲಕ್ಕೆ ಹಾರಿದನು. ತಲೆಗೆ ಗದಾ ಘಾತ ಪಡೆದ ಕುದುರೆ ಕೆಟ್ಟ ದನಿಯಿಂದ ಹೀಹೀ ಗರೆಯುತ್ತ, ಹುಚ್ಚು ಹಿಡಿದಂತೆ ಓಡಿ ಮತ್ತೊಂದು ಕುದುರೆಗೆ ಢೀ ಕೊಟ್ಟಿತು.

ಆ ಹೊಡೆತಕ್ಕೆ ಆ ಕುದುರೆಯ ಮೇಲಿದ್ದವನು ನೆಲಕ್ಕೆ ಬಿದ್ದನು. ಮೊದಲು ಆಕಾಶಕ್ಕೆ ಹಾರಿ ನೆಲಕ್ಕೆ ಧುಮುಕಿದ ಮಾಯಾ ಮರ್ಕಟನು ಸೈನಿಕನನ್ನು ನೆಲಕ್ಕೆ ಬೀಳಿಸಿ ಖಾಲಿಯಾದ ಆ ಕುದುರೆಯ ಮೇಲೇರಿ, ಅದರ ಕಡಿವಾಣವನ್ನು ಎಳೆಯುತ್ತ ವಾಯುವೇಗದಿಂದ ಓಡಿಸಿಕೊಂಡು ನಗರದ ಕಡೆಗೆ ಓಡ ತೊಡಗಿದನು.

ಉಗ್ರದಂಡ ರಾಕ್ಷಸನು ಮಾಯಾಮರ್ಕಟನನ್ನು ಹೊಡೆಯಲು ಮತ್ತೊಮ್ಮೆ ಗದೆಯನ್ನು ಎತ್ತಿ ದಾಗ, ಮಾಯಾಮರ್ಕಟನು ಓಡಿಹೋಗಿ ಮಂತ್ರಿ ಜೀವಗುಪ್ತನ ಹತ್ತಿರ ತಟ್ಟನೆ ಕುದುರೆಯನ್ನು ನಿಲ್ಲಿಸಿ, "ನೀವೆಂಥ ಮಹಾ ಮಂತ್ರಿಗಳೋ, ಬರೀ ಕಂತೆ ಬೊಂತೇ ಮಂತ್ರಿಗಳೋ ಏನೋ! ನಿಮ್ಮ ಉಪಾಯ ಒಂದು ಕೂದಲಿನಷ್ಟು ಸಹಾ ನಡೆಯಲಿಲ್ಲ



ನೋಡಿದಿರಾ? ಈಗ ನಾನು ಮುಂದಾಗಿ ಚಂದ್ರಶಿಲಾ ನಗರಕ್ಕೆ ಹೋಗಿ ಜಿತಕೇತು ಮಹಾರಾಜನೊಂದಿಗೆ ಇಲ್ಲಿ ನಡೆದ ಸಮಾಚಾರವನ್ನೆಲ್ಲಾ ಹೇಳಿ, ಈ ನಗರದ ರಕ್ಷಣೆಗೆ ತಕ್ಕ ಏರ್ಪಾಡು ಮಾಡಿಸಿಕೊಂಡು ಬರುತ್ತೇನೆ." ಎಂದನು.

ಆದರೆ ಮಂತ್ರಿ ಜೀವಗುಪ್ತನು ಅವನ ಮಾತನ್ನು ಅರ್ಥಮಾಡಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ಕೋಟೆಯೊಳಗಿನಿಂದ ತನ್ನ ಕಡೆಗೇ ಬರುತ್ತಿರುವ ಕರಡಿಕೆಂಗಣ್ಣ ಮಾಂತ್ರಿಕನನ್ನೂ, ಕಾಳೀವರ್ಮನನ್ನೂ ನೋಡಿ ಥರಥರನೆ ನಡುಗುತ್ತಿದ್ದನು. ಆ ಸ್ಥಿತಿಯಲ್ಲಿ ಅವನು ಮಾಯಾಮರ್ಕಟನನ್ನು ನೋಡಿ, "ಮಾಯಾವಿದ್ಯೆ ಕಲಿತ ನಿನಗೇನೂ ಭಯವಿಲ್ಲವೆಂದು ಕಾಣುತ್ತದೆ. ಸ್ವಲ್ಪ ನಿಲ್ಲಪ್ಪಾ ಮಾಯಾಮರ್ಕಟಾ! ನನ್ನ ಪಾಡಿಗೆ ಓಡಿಹೋಗಿ ಬಿಡಬೇಡ. ಅಗೋ ಅಲ್ಲಿ ಬರುತ್ತಿರುವ ದೊಡ್ಡ ಮಂತ್ರವಾದಿಯಿಂದ, ಅಮಾನುಷ ಶಕ್ತಿಯುಳ್ಳ ಆ ರಾಕ್ಷಸನಿಂದ ನಗರವನ್ನು ಕಾಪಾಡಲು ಯಾರಿಂದ ಸಾಧ್ಯವಾದೀತು? ಪ್ರಸ್ತುತ ಅರಣ್ಯದೊಳಗೆ ಓಡಿಹೋಗುವುದೇ ಒಳ್ಳೇದು. ನನ್ನ ಮಾತು ಕೇಳು. ನೀನೂ ನನ್ನೊಂದಿಗೆ ಬಾ." ಎಂದನು.

"ಎಂತಹ ನಾಚಿಕೆಗೇಡಿನ ಮಾತು ಹೇಳುವೆ ಅಯ್ಯಾ ಮಹಾಮಂತ್ರೀ! ಅದು ಭೀರುಗಳು ಮಾಡುವ ಕೆಲಸ. ನಾನೀಗ ಮೊದಲು ನಿಮ್ಮ ಜಿತಕೇತು ಮಹಾರಾಜನನ್ನು ನೋಡಬೇಕು. ಅನಂತರ ಈ ಕರಡಿಕೆಂಗಣ್ಣ ಮಾಂತ್ರಿಕನನ್ನೂ, ಕಾಳೀವರ್ಮನನ್ನೂ ನಾಶಮಾಡುವ ಉಪಾಯ ಆಲೋಚಿಸುತ್ತೇನೆ." ಎಂದು ಹೇಳಿ ಮಾಯಾಮರ್ಕಟನು ಮಂತ್ರಿಯ ಪ್ರತ್ಯುತ್ತರಕ್ಕೂ ಕಾಯದೆ. ತನ್ನ ಕುದುರೆಯನ್ನು ನಗರದ ಕಡೆಗೆ ವೇಗವಾಗಿ ಓಡಿಸಿದನು.

ಉಗ್ರದಂಡ ರಾಕ್ಷಸನು ಏನೋ ನಿರಾಶೆಯ ಸಂತಾಪದಿಂದ, ಗಟ್ಟಿಯಾಗಿ ಹಲ್ಲು ಕಡಿದು, "ಎಲೋ, ಮಂತ್ರಿಯೇ! ನಿನ್ನಂಥ ಮಂತ್ರಿಯ ಮೇಲೆ ನನಗೇನೂ ಕೋಪವಿಲ್ಲ. ಈ ಸಾಮಂತ ಸೂರ್ಯಭೂಪತಿಯ ಮೇಲೆ ಕೂಡಾ ನನಗೇನೂ ಕೋಪವಿಲ್ಲ. ನೀನೂ ರಾಜನೂ ಕೂಡಿ ಕಾಳೀವರ್ಮನನ್ನು ಗಲ್ಲಿಗೇರಿಸುವ ಯೋಜನೆ ಹಾಕಿ ಇಷ್ಟೆಲ್ಲಾ ರಗಳೆಗಳಿಗೆ ಕಾರಣರಾದಿರಿ. ಅಂತಹ ನಿನ್ನನ್ನು ತಕ್ಕ ರೀತಿಯಲ್ಲಿ ಶಿಕ್ಷಿಸಬೇಕಾಗಿದೆ. ಮೊದಲು ನೀನು ಕುದುರೆಯಿಂದ ಇಳಿ!" ಎಂದನು.

ಉಗ್ರದಂಡ ರಾಕ್ಷಸನು ಮಾತು ಮುಗಿಸುವುದರೊಳಗೇ, ಮಂತ್ರಿ ಜೀವಗುಪ್ತನು ವಿಪರೀತವಾಗಿ ಹೆದರಿ ಕುದುರೆಯನ್ನು ತಟ್ಟಿ ಕೆರಳಿಸಿ, "ಈಗ ನೀನೇ ಗತಿ ನನ್ನ ಪ್ರೀತಿಯ ಕುದುರೆ ರಾಜಾ! ತಪ್ಪಿಸಿಕೊಂಡು ಬೇಗನೇ ಓಡು! ಈ ರಾಕ್ಷಸನು ನಮ್ಮಿಬ್ಬರನ್ನೂ ತಿಂದುಬಿಡುತ್ತಾನೆ. ಜೀವದ ಮೇಲೆ ಆಶೆಯಿರುವವರೆಲ್ಲರೂ ನನ್ನ ಹಿಂದೆ ಓಡಿಬನ್ನಿರಿ." ಎಂದು ಕೂಗಿ ಹೇಳಿ ನಗರದ ಕಡೆಗೆ ಹೊರಟನು. ಅವನ ಹಿಂದೆಯೇ ಸಾಮಂತ ಸೂರ್ಯಭೂಪತಿಯೂ,

ಸೈನಿಕರೂ ಸಹ ಮಂತ್ರಿಯನ್ನು ಅನುಸರಿಸಿ ಓಡಿ ಹೋಗ ತೊಡಗಿದರು.

ಆಗ ಉಗ್ರದಂಡ ರಾಕ್ಷಸನು ತನ್ನ ಕೈಗೆ ಸಿಕ್ಕಿದ ಒಂದು ಕುದುರೆಯ ಹಿಂದಿನ ಕಾಲುಗಳನ್ನು ಹಿಡಿದು ಎಳೆದನು. ಆ ಕುದುರೆಯ ಮೇಲಿದ್ದ ಸೈನಿಕನು ಧಡಾಲ್ಲನೆ ಬಿದ್ದನು. ಉಗ್ರದಂಡ ರಾಕ್ಷಸನು ಆ ಸೈನಿಕನ ಕುತ್ತಿಗೆಯ ಹಿಮ್ಮಡನ್ನು ಹಿಡಿದು ಮೇಲೆತ್ತಿ, "ಎಲೋ! ನರ ವೀರನೇ! ನಿನ್ನನ್ನು ಕೊಲ್ಲಲಾರೆ. ನಿನ್ನ ಕೈಕಾಲು ಮುರಿದು ಹೋದ ಹಾಗೆ ಯಾವ ಗುರುತುಗಳೂ ಇಲ್ಲ. ಇಲ್ಲಿರಬೇಡ. ಕಾಡಿನೊಳಗೆ ಓಡಿ ಹೋಗಿಬಿಡು. ನಗರಕ್ಕಿಂತಲೂ ನಿನಗೆ ಅರಣ್ಯವೇ ಕ್ಷೇಮ." ಎಂದು ಹೇಳಿ ಅವನನ್ನು ಕೆಳಗೆ ಜಾರಿಸಿಬಿಟ್ಟನು.

ಅಷ್ಟರಲ್ಲಿ ಅಲ್ಲಿಗೆ ಮಾಂತ್ರಿಕ ಕರಡಿಕೆಂಗಣ್ಣನೂ ಕಾಳೀವರ್ಮನೂ ಬಂದರು. ಶಮ್ಮ ನಗರದ ಕಡೆಗೆ ಹಿಂದಿರುಗಿ ಓಡಿಹೋಗುತ್ತಿರುವ ಜಿತಕೇತು ಸೈನಿಕರ ಕಡೆಗೆ ನೋಡುತ್ತ ಕಾಳೀವರ್ಮನು, "ಉಗ್ರದಂಡ ರಾಕ್ಷಸಾ! ಎಂಥಾ ಹೀನ ಕೆಲಸವಿದು ? ನಮ್ಮ ಶತ್ರುವಾದ ಆ ಮಂತ್ರಿಯನ್ನೂ, ಅವನ ಸೈನಿಕರನ್ನೂ ಹಾಗೆ ಓಡಲು ಬಿಟ್ಟು, ಈ ಒಬ್ಬ ಹೇಡಿ ಸೈನಿಕನನ್ನು ಹಿಡಿದೆಯಲ್ಲಾ ? ಏಕೆ? ಇದು ನಿನ್ನಂಥವನಿಗೆ ಶೋಭಿಸುವುದೆ ? ನೀನು ಆ ಮಂತ್ರಿ ಜೀವಗುಪ್ತನನ್ನು ಹಿಡಿಯಬೇಕಿತ್ತು" ಎಂದನು.

ಕರಡಿಕೆಂಗಣ್ಣ ಮಾಂತ್ರಿಕನು ತುಂಬ ನಿರುತ್ಸಾಹದ ಮೋರೆ ಮಾಡಿಕೊಂಡು, "ಆ ಬುದ್ಧಿಗೇಡಿಮಂತ್ರಿಯ ದೇನಿದೆ ಬಿಡಪ್ಪಾ. ನನ್ನ ಮಂತ್ರದಂಡವನ್ನು ಕದ್ದುಕೊಂಡ ಆ ಮಾಯಾಮರ್ಕಟನನ್ನು ಹಿಡಿದು ಬಂಧಿಸಿದ್ದರೆ ನನಗೆ ತುಂಬಾ ಸಂತೋಷವಾಗುತ್ತಿತ್ತು. ಅವನು ಈ ರಾಕ್ಷಸನನ್ನು ತಪ್ಪಿಸಿಕೊಂಡು ಎಷ್ಟು ವೇಗವಾಗಿ ಓಡಿ ಕಣ್ಮರೆಯಾಗಿಬಿಟ್ಟನಲ್ಲ" ಎಂದನು.

ಆಗ ಉಗ್ರದಂಡ ರಾಕ್ಷಸನು ಕಾಲು ಮುರಿದವನ ಹಾಗೆ ಚಕ್ಕನೆ ಕುಳಿತು, ತನ್ನ ಕೈಯಲ್ಲಿದ್ದ ಕಲ್ಲಿನ ಗದೆ



ಯನ್ನು ಅಷ್ಟು ದೂರಕ್ಕೆ ಬಿಸುಟು, "ಕರಡಿಕೆಂಗಣ್ಣ ಮಾಂತ್ರಿಕೇಶ್ವರಾ! ಆ ಮಾಯಾಮರ್ಕಟನ ಬಾಯಿಯಿಂದ ಬಹಳ ಕೆಟ್ಟ ವಾರ್ತೆ ಕೇಳಿದೆನಯ್ಯಾ! ತಾಂತ್ರಿಕ ಮಿಥ್ಯಾ ಮಿತ್ರನು ನನ್ನ ಅಣ್ಣನನ್ನು ಕೊಂದು ಮಣ್ಣಿನೊಳಗೆ ಹುಗಿದಿದ್ದಾನಂತೆ! ಅದು ನಿಜವಾದರೆ ನನಗೇನೂ ಇಲ್ಲ! ಸರ್ವಶೂನ್ಯ! ಆ ಮರ್ಕಟ ಮೂತಿ ಹೇಳುವ ಈ ಮಾತನ್ನು ನಂಬಬಹುದೋ? ನಿನಗೇನು ತೋರುತ್ತೆ ?" ಎಂದು ಭಾರವಾದ ಸ್ವರದಿಂದ ಕೇಳಿದನು.

"ಆ ನಿನ್ನ ಅಣ್ಣನ ಹೆಸರೇನು ?" ಎಂದು ಕರಡಿಕೆಂಗಣ್ಣನು ಕೇಳಿದನು. "ನನ್ನ ಅಣ್ಣನ ಹೆಸರು ಕಾಲದಂಡನೆಂದು. ಆತನ ವಾಸಸ್ಥಾನ ಕೂಡಾ ಭಲ್ಲೂಕಪಾದ ಪರ್ವತ ಪ್ರಾಂತದಲ್ಲೇ ಇರುತ್ತದೆ. ನಿಮಗೆ ಗೊತ್ತೇ? ನೋಡಿದ್ದೀರಾ ನನ್ನ ಅಣ್ಣನನ್ನು ?" ಎಂದು ಆತುರದಿಂದ ಕೇಳಿದನು ಉಗ್ರದಂಡ. ಕರಡಿಕೆಂಗಣ್ಣನು ಸ್ವಲ್ಪ ಹೊತ್ತು ಆಲೋಚನೆ

ಮಾಡಿ, ತಲೆಯಾಡಿಸುತ್ತ, "ಉಗ್ರದಂಡಾ! ಆ ತಾಂತ್ರಿಕ ದುಷ್ಟನು ನನ್ನ ಗುರುವನ್ನು ಹತಮಾಡಲು ಎಂತೆಂಥವರನ್ನೆಲ್ಲಾ ತನ್ನ ಜತೆ ಸೇರಿಸಿಕೊಳ್ಳುತ್ತಿದ್ದ. ಕೆಲವರನ್ನು ತನ್ನ ತಾಂತ್ರಿಕ ಶಕ್ತಿಗಳಿಂದ ಬಂಧಿಸಿ ಊಳಿಗಮಾಡಿಸಿಕೊಳ್ಳುವುದೂ ಇದೆ. ನೀನು ಹೇಳುವ ಕಾಲದಂಡನೆಂಬ ಹೆಸರಿನ ರಾಕ್ಷಸನನ್ನು ನಾನು ಕೇಳಿಲ್ಲ. ಒಂದು ಸಂಗತಿ ಮಾತ್ರ ಮರೆಯಬೇಡ. ಸುಳ್ಳಿನ ಮೂರ್ತಿಯಾದ ಈ ಮಾಯಾಮರ್ಕಟನ ಮಾತು ಮಾತ್ರ ನಂಬಲೇ ಬೇಡ." ಎಂದನು.

ಅದನ್ನು ಕೇಳಿ ಉಗ್ರದಂಡ ರಾಕ್ಷಸನಿಗೆ ಹೊಸ ಹುರುಪು ಬಂದು, ಏನೋ ಬಾಚಿಕೊಳ್ಳುವವನಂತೆ ತಲೆ ಕೊಡರಿ ಕೈಗಳನ್ನಾಡಿಸಿ ಎದ್ದು ನಿಂತು, "ಹೌದು. ನಿಮ್ಮ ಬಾಯಿಗೆ ಅಮೃತ ಬೀಳಲಿ. ನನ್ನ ಅಣ್ಣ ಬದುಕಿಯೇ ಇದ್ದಾನೆಂದು ನನಗೊಂದು ನಂಬುಗೆ ಯಿದೆ. ಅದನ್ನು ನೀವು ಬಲಪಡಿಸಿದಿರಿ. ಕೆಲವು ವರ್ಷಗಳ ಕೆಳಗೆ ಬ್ರಹ್ಮಪುತ್ರಾನದಿಯ ಕಣಿವೆಯ ಪ್ರಾಂತಗಳಿಗೆ ಬಂದ ತಾಂತ್ರಿಕ ಶಕ್ತಿಗಳನ್ನು ಪಡೆದವರಿಗೆ ಹೆದರಿ, ನಾನು ಈ ಕಡೆಗೆ ಓಡಿಬಂದುಬಿಟ್ಟೆ. ಅವರ ಮಂತ್ರತಂತ್ರಗಳ ಮುಂದೆ ನನ್ನ ಈ ಕಲ್ಲಿನ ಗದೆ ಕೆಲಸಕ್ಕೆ ಬಾರದು. ನನ್ನದು ಸೀದಾ ರೀತಿಯ ಬಹಿರಂಗ ಶಕ್ತಿ ಅಷ್ಟೇ. ಅಂತರಂಗದ ಶಕ್ತಿಗಳಾದ ಮಂತ್ರವೂ ಒಳತಂತ್ರವೂ ನನಗೆ ತಿಳಿಯದು. ಮಂತ್ರ ಶಕ್ತಿಯಲ್ಲಿ ನಿಮ್ಮ ಗುರುಗಳು ಎಂತೆಂಥವರನ್ನೂ ಮೀರಿಸಿದವರೆಂದು ನೀವು ಹೇಳುವಿರಷ್ಟೆ? ಅದಕ್ಕೇ ನಾನು ನಿಮ್ಮೊಂದಿಗೆ ಆ ಪ್ರಾಂತಕ್ಕೆ ಬಂದು ಆ ದುಷ್ಟರ ಸರ್ವನಾಶಮಾಡಲು ನಿಮಗೆ ಸಹಾಯಕನಾಗಿರುತ್ತೇನೆ" ಎಂದನು.

ಉಗ್ರದಂಡನ ಮಾತುಗಳನ್ನು ಕೇಳಿ ಕೆಂಗಣ್ಣ ಮಾಂತ್ರಿಕನಿಗೆ ಮಾತ್ರವಲ್ಲ, ಕಾಳೀವರ್ಮನಿಗೂ ಬಹಳ ಸಂತೋಷವಾಯಿತು. ಅವನು ಉಗ್ರದಂಡನನ್ನು ನೋಡಿ. "ಉಗ್ರದಂಡಾ! ನಾವು ಆದಷ್ಟು ಬೇಗನೇ ಇಲ್ಲಿಂದ ಹೊರಟು ಆ ಭಲ್ಲೂಕಪಾದ ಪರ್ವತ ಪ್ರಾಂತಕ್ಕೆ ಹೋಗೋಣ. ಹೋಗುವ ಮೊದಲು ನಮ್ಮ ಗುರು ಮಾಂತ್ರಿಕರ ಮಂತ್ರದಂಡವನ್ನು ಸಂಪಾದಿಸಬೇಕು. ಅದಕ್ಕಾಗಿ ಆ ಮಾಯಾ ಮರ್ಕಟನನ್ನು ಹೇಗಾದರೂ ಮಾಡಿ ಹಿಡಿಯಬೇಕು. ಅಲ್ಲದೆ ದುಷ್ಟನಾದ ಜಿತಕೇತು ರಾಜನಿಗೂ ತಕ್ಕ ಬುದ್ಧಿ ಕಲಿಸಿಬಿಡಬೇಕು" ಎಂದನು.

ಕಾಳೀವರ್ಮನ ಬಾಯಿಯಿಂದ ಅಷ್ಟು ಮಾತು ಕೇಳಿದ ಕೂಡಲೇ ಕಟುಕಕರಡಿ ಮನುಷ್ಯನು "ಜೈ! ಭೈರವಾ!" ಎಂದು ಕೂಗಿ ತನ್ನ ಆನೆಯನ್ನು ನಗರದ ಕಡೆಗೆ ಹೊರಡಿಸಿದನು.

ಅಷ್ಟರೊಳಗೆ ಚಂದ್ರಶಿಲಾ ನಗರದಲ್ಲಿ ಏನಾಯಿತೆಂದರೆ, ಕುದುರೆಯ ಮೇಲೆ ಅತಿವೇಗವಾಗಿ ಹೋದ ಮಾಯಾಮರ್ಕಟನು, ನಗರದ ದ್ವಾರವನ್ನು ತಲಪಿದ ಕೂಡಲೇ, ಅಲ್ಲಿದ್ದ ಕಾವಲಿನ ಭಟರಿಬ್ಬರು, ಮರ್ಕಟದಂಥವನನ್ನು ನೋಡಿ ಆಶ್ಚರ್ಯಪಡುತ್ತ, "ಓಹೊ!

ಏನಿದು? ಮರಗಳಲ್ಲಿ ನೇತಾಡುವ ಕೋತಿ ಕುದುರೇ ಮೇಲೆ ಕೂತು ಓಡಿಬಂದಿದೆ! ಏನದ್ಭುತ!" ಎನ್ನುತ್ತ ಕತ್ತಿಗಳನ್ನು ಅಡ್ಡ ಹಿಡಿದು, "ಏಯ್! ಮರಮಂಗಾ! ಎಲ್ಲಿಗಿದು ಸವಾರೀ ? ನಿಲ್ ನಿಲ್ಲು!" ಎಂದರು.

ಮಾಯಾಮರ್ಕಟನು ಕಿವಿಗಳು ತೂತು ಬೀಳುವಂತೆ ಕೀಚಿಂದು ಅರಚಿ, "ಎಲವೋ ಭಟಾಧಮರೇ! ನಾನು ಸಾಧಾರಣ ಮರಮಂಗನಲ್ಲ! ಮಂತ್ರಶಕ್ತಿಗಳನ್ನು ಪಡೆದ ಭ್ರಾಂತಿಮತಿ ನಾನು. ದಾರಿ ಬಿಡಿ. ನಿಮ್ಮ ಮಹಾರಾಜನಿಗೆ ಬರುವ ದೊಡ್ಡದೊಂದು ಆಪತ್ತನ್ನು ನಿವಾರಣೆಮಾಡಲು ಬಂದಿದ್ದೇನೆ." ಎಂದು ಕುದುರೆಯನ್ನು ಮುಂದಕ್ಕೆ ಹೊರಡಿಸಿದನು.

ಕಾವಲುಗಾರರಲ್ಲೊಬ್ಬ ಅವನ ಮಾತು ಕೇಳಿ ಬೆರಗಾಗಿ ಬೆಚ್ಚರಗೊಂಡು ಎರಡಡಿ ಹಿಂದಿಟ್ಟನು. ಆದರೆ ಎರಡನೇ ಭಟನು ಯಾವುದಕ್ಕೂ ಹೆದರದೆ, ಕತ್ತಿಯನ್ನು ಮರ್ಕಟನ ತಲೆಗೆ ಗುರಿಯೆತ್ತಿ, "ನೀನು ತಾಂತ್ರಿಕನೋ ಮಾಂತ್ರಿಕನೋ ನಮಗೆ ತಿಳಿಯ ಬೇಕಾಗಿಲ್ಲ. ಮೊದಲು ನಮ್ಮ ಹಿಂದೆ ನಮ್ಮ ನಾಯಕರ ಬಳಿಗೆ ಬಾ." ಎಂದು ಕುದುರೆಯ ಕಡಿವಾಣಕ್ಕೆ ಕೈಹಾಕಿದನು.

ಆ ಕೂಡಲೇ ಮಾಯಾಮರ್ಕಟನು ತನ್ನ ಕೈಯಲ್ಲಿದ್ದ ಮಂತ್ರದಂಡದಿಂದ ಕಾವಲುಗಾರನ ಕತ್ತಿಯನ್ನು ಬದಿಗೆ ದೂಡಿದನು. ಮಂತ್ರದಂಡದ ಒರೆಸಾಟಕ್ಕೆ ಕತ್ತಿ ಮಿಂಚಿನ ಹಾಗೆ ಒಮ್ಮೆಗೇ ಧಗಧಗಿಸಿ ಉರಿದು ಕರ್ಪೂರದ ಕತ್ತಿಯಂತೆ ಮಾಯವಾಯಿತು!

ಕಾವಲುಗಾರರಿಬ್ಬರೂ ಸಾಯುವ ಹಾಗೆ ಕೂಗಿ ಬದಿಗೆ ತಪ್ಪಿಸಿಕೊಂಡರು, "ಜೈ! ತಾಂತ್ರಿಕ ಗುರೋ!" ಎಂದು ಕೂಗುತ್ತ ಮಾಯಾಮರ್ಕಟನು ಕುದುರೆಯನ್ನು ಮುಂದಕ್ಕೆ ಹರಿಸಿ ರಾಜಬೀದಿಯನ್ನು ಸೇರಿದನು.

ನಗರ ದ್ವಾರಕ್ಕೆ ಸ್ವಲ್ಪ ದೂರದಲ್ಲಿ ಗೋಡೆಯ ಹತ್ತಿರ ಕೆಲವುಂದಿ ಕಾವಲಿನ ಭಟರೊಂದಿಗೆ ಕೂಡಿ ನಗುತ್ತ ಕೆಲೆಯುತ್ತ ಹರಟೆಯಲ್ಲಿ ಮಗ್ನನಾದ ಅವರ ನಾಯಕನು, ದ್ವಾರದ ಹತ್ತಿರ ಭಟರು ಕೂಗಿಕೊಂಡು





ದನ್ನು ಕೇಳಿ ಕತ್ತೆತ್ತಿ ಇತ್ತ ನೋಡಿದನು. ಅವರ ಹರಟೆಗಳು ಅಲ್ಲಿಂದಲ್ಲಿಗೇ ನಿಂತುಹೋಗಿತ್ತು.

ಕುದುರೆಯ ಮೇಲೆ ವಿಚಿತ್ರ ಕೋತಿರೂಪದವನು ಹೋಗುವುದನ್ನು ನೋಡಿ, ನಾಯಕನು ಕತ್ತಿ ಹಿರಿದು ತನ್ನ ಕುದುರೆಯ ಕಡೆಗೆ ಓಡುತ್ತ, "ಓಹೋ ! ಯಾವನೋ ಶತ್ರು ರಾಜರ ಗೂಢಚಾರಿ ಕೋತಿ ವೇಷದಲ್ಲಿ ಬಲವಂತದಿಂದ ನಗರದೊಳಗೆ ನುಗ್ಗಿದ್ದಾನೆ. ಬನ್ನಿರಿ! ಓಡಿಸಿರಿ! ಹಿಡಿಯಿರಿ ಅವನನ್ನು !" ಎಂದು ಕೂಗಿ ಹೇಳಿದನು.

ಕಾವಲು ಭಟರ ನಾಯಕನು ತನ್ನ ಕುದುರೆಯನ್ನೇರಿ, ಭಟರನ್ನು ಕೂಡ ಹಾಕಿ ಹೊರಡುವುದರೊಳಗೆ, ಮಾಯಾಮರ್ಕಟನು ವಾಯುವೇಗದಿಂದ ಬಹುದೂರ ಹೋಗಿದ್ದನು. ತುಸು ದೂರದಲ್ಲಿ ರಾಜಭವನವು ಕಾಣುತ್ತಿದ್ದಿತು. ಅಲ್ಲಿ ರಾಜಭವನದ ಮುಂದಿರುವ ವಿಶಾಲವಾದ ಮೈದಾನದ ಒಂದು ಬದಿಯಲ್ಲಿ ಜನರು ಗುಂಪಾಗಿ ಏನೋ ಆಟ ನೋಡುತ್ತಿದ್ದರು. ಅವರ ನಡುವೆ ಆಟವಿಕನೊಬ್ಬ ಕೋತಿ, ಕರಡಿ ಮೊದಲಾದ ಪಳಗಿಸಿದ ಪ್ರಾಣಿಗಳನ್ನು ಆಟವಾಡಿಸುತ್ತ ಸೇರಿದ ಜನರನ್ನು ಆನಂದಪಡಿಸುತ್ತಿದ್ದನು.

ಮಾಯಾಮರ್ಕಟನು ಕುದುರೆ ಮೇಲೇರಿ ಆ ಕಡೆಗೇ ಹೋಗಲು, ಗುಂಪಿನಲ್ಲಿದ್ದವರು ನೋಡಿ, ಉತ್ಸಾಹದಿಂದ ಚಪ್ಪಾಳೆ ಬಾರಿಸುತ್ತ, "ಆಹಾಹಾ! ಕಾಡು ಕೋತಿ! ಮನುಷ್ಯಮುಂಗ! ಕುದುರೆ ಸವಾರಿ! ನೋಡಿ ನೋಡಿ! ಯಾರು ಈ ಕೋತೀ ವೇಷದ ಆಟಗಾರ?" ಎಂದು ಕೂಗಾಡ ತೊಡಗಿದರು.

ಆ ಪ್ರಾಣಿಗಳನ್ನು ಆಡಿಸುವ ಆಟವಿಕನು ಮಾಯಾಮರ್ಕಟನ ಕಡೆಗೆ ಒಮ್ಮೆ ನೋಡಿ, "ಇದಾವುದೋ ಒಳ್ಳೇ ಶಿಕ್ಷಣ ಪಡೆದ ಕೋತಿ! ಆದರ ಯಜಮಾನನ ಕಣ್ಣು ತಪ್ಪಿಸಿ ಹೀಗೆ ಓಡಿ ಬಂದಿರಬೇಕು! ಯಾವುದಕ್ಕೂ ಇದನ್ನು ಹಿಡಿಯುವುದು ಒಳ್ಳೇದು." ಎಂದುಕೊಂಡನು.

ಅವನು ಹೀಗೆಂದುಕೊಂಡು ಬೇಗನೇ ಮುಂದೆ ಬಂದು ಉರುಳಿನ ಹಗ್ಗವನ್ನು ಮಾಯಾಮರ್ಕಟನ ಕಂಠ ಪ್ರದೇಶಕ್ಕೆ ಗುರಿಯಿಟ್ಟು ಬೀಸಿದನು. ಆದರೆ ಹಗ್ಗದುರುಳು ಜಾರಿ ಮರ್ಕಟನ ಸೊಂಟದಲ್ಲಿ ಬಿಗಿದುಕೊಂಡಿತು. ಮರುಕ್ಷಣದಲ್ಲಿ ಮಾಯಾಮರ್ಕಟನು ಕೀಚುಧ್ವನಿ ಮಾಡಿ ಲಾಗಹಾಕಿದ ಹಾಗೆ ನೆಲಕ್ಕೆ ಬಿದ್ದನು. ಬೀಳುವಾಗ ಅವನ ಕೈಯಲ್ಲಿದ್ದ ಮಂತ್ರದಂಡವು ಹಾರಿ ಹೋಗಿ ಇನ್ನಿಷ್ಟು ದೂರದಲ್ಲಿ ಬಿತ್ತು. ಖಾಲೀ ಕುದುರೆ ಮುಂದೆ ಓಡಿತು.

ಪ್ರಾಣಿಗಳನ್ನು ಆಡಿಸುವವನು ಮಾಯಾಮರ್ಕಟನ ಬಳಿಗೆ ಓಡಿ, ಅವನ ಎರಡು ಕಿವಿಗಳನ್ನೂ ಹಿಡಿದು ಮೇಲೆತ್ತಿ ನಿಲ್ಲಿಸಿ, "ಓ! ಕೀಚು ಕೀಚು ಕೀಚಣ್ಣಾ! ಈ ಕ್ಷಣದಿಂದ ನಿನ್ನ ಯಜಮಾನ ನಾನು! ಇನ್ನು ಮೇಲೆ ನನ್ನ ಮಾತು ಕೇಳದೆ ತುಂಟಾಟ ಮಾಡಿದೆಯೆಂದರೆ, ನಿನ್ನ ಬಾಲಕ್ಕೆ ಎಣ್ಣೇ ಬಟ್ಟೆ ಸುತ್ತಿ ಬೆಂಕಿ ಹಚ್ಚುತ್ತೇನೆ! ಲಂಕಾದಹನದ ಹಾಗೆ ಮಾಡಲು

ಇಲ್ಲಿ ಯಾರೂ ರಾಕ್ಷಸರಿಲ್ಲ. ಬಾಲ ಮುದುಡಿ ನನ್ನ ಜತೆಯಲ್ಲಿ ಬಾ ಸುಮ್ಮನೆ!" ಎಂದನು.

ಮಾಯಾ ಮರ್ಕಟನು ಹಲ್ಲು ಕಡಿಯುತ್ತ ಸುತ್ತಲೂ ನಿಂತವರನ್ನು ನೋಡಿ, ನಂತರ ತನ್ನನ್ನು ಹಿಡಿದವನನ್ನು ದುರುಗುಟ್ಟಿ ನೋಡುತ್ತ, "ಎಲೋ ಮೂಢನೇ! ಭಂಡನೇ! ಬುದ್ಧಿ ಮಣ್ಣು ತಿಂದವನೇ! ನನ್ನನ್ನು ಯಾರೆಂದು ತಿಳಿದೇ? ನಾನು ಸಾಧಾರಣ ಕೋತಿಯಲ್ಲ. ಅದ್ಭುತ ಶಕ್ತಿಗಳನ್ನು ಪಡೆದ ತಾಂತ್ರಿಕ ಭ್ರಾಂತಿಮತಿ! ನಿಮ್ಮ ರಾಜನಿಗೆ ದೊಡ್ಡದೊಂದು ವಿಪತ್ತು ಬರುತ್ತಿದೆ. ಅದನ್ನು ಹೇಳಿ ಎಚ್ಚರ ಪಡಿಸಲಿಕ್ಕೇ ಹೋಗುತ್ತಿದ್ದೇನೆ. ಇಂತಹ ದೊಡ್ಡ ರಾಜ ಕಾರಣದವನಾದ ನನ್ನನ್ನು ಮಧ್ಯದಲ್ಲಿ ವಿಚಾರ ಸಾಚಾರವಿಲ್ಲದೆ ಹೀಗೆ ಅವಮಾನ ಪಡಿಸಿದೆಯಾ? ಇದು ನಿನ್ನ ರಾಜನಿಗೇ ದ್ರೋಹ! ರಾಜನೇ ನಿನ್ನ ತಲೆ ಹಾರಿಸುವಂತೆ ಮಾಡುತ್ತೇನೆ. ಎಲ್ಲಿ ನನ್ನ ಮಂತ್ರದಂಡ?" ಎಂದು ಕರ್ಕಶ ಸ್ವರದಲ್ಲಿ ಹೇಳಿ ಅತ್ತಿತ್ತ ನೋಡಿದನು.

ಅವನ ಮಾತುಗಳನ್ನು ಕೇಳಿ ಪ್ರಾಣಿಗಳನ್ನು ಆಡಿಸಿ ಬದುಕುವ ಆಟವಿಕನ ತಲೆ, ಹೆದರಿ ತಿರುಗ ತೊಡಗಿತು. ಅವನು ಎರಡು ಮೂರು ಅಡಿಗಳನ್ನು ಹಿಂದಕ್ಕಿಟ್ಟು, ಏನೋ ಒಂದು ಉಪಾಯವನ್ನು ನೆನೆದು, ತನ್ನ ಕರಡಿಯನ್ನು ನೋಡಿದನು. ಆ ಕರಡಿಯ ಕೊರಳಿಗೆ ಸಿಕ್ಕಿಸಿದ್ದ ಕಬ್ಬಿಣದ ಸಂಕಲೆಯನ್ನು ಹಿಡಿದು ಅದನ್ನು ಮುಂದಕ್ಕೆ ಎಳೆಯುತ್ತ, "ಇದು ಯಾವುದೋ ಪಿಶಾಚಿ. ಕೋತಿ! ಏನೋ ಹೇಳಿ ಹೆದರಿಸಲು ನೋಡುತ್ತೆ! ಪ್ರಾಣಿಯನ್ನು ಪ್ರಾಣಿಯ ಮೂಲಕವೇ ಅಡಗಿಸಬೇಕು" ಎನ್ನುತ್ತ ತನ್ನ ಪಳಗಿದ ಕರಡಿಗೆ ಸನ್ನೆ ಮಾಡಿ ಮುಂದಕ್ಕೆ ಬಿಟ್ಟನು.

ಆ ಕರಡಿ ಜಟ್ಟಿಯಂತೆ ತೋಳುಗಳನ್ನು ತಟ್ಟಿಕೊಂಡು, ಬಾಯಿಯನ್ನು ಅಗಲಿಸಿಕೊಂಡು ಮಾಯಾ ಮರ್ಕಟನ ಮೇಲೆ ಧುಮುಕಿತು. ಮಾಯಾ



ಮರ್ಕಟನು ಈ ಹೊಸ ಆಕ್ರಮಣದಿಂದ ಸಾಯುವ ಹಾಗೆ ಕಿರಿಚುತ್ತ, "ಲೋ! ಲೋ! ನಾನು ಜಿತಕೇತು ಮಹಾರಾಜರಿಗೆ ಒಳ್ಳೆಯದು ಮಾಡಲಿಕ್ಕೆ ಬಂದವನೋ! ಅವರಿಗೆ ಕರಡಿಕೆಂಗಣ್ಣ ಮಾಂತ್ರಿಕನಿಂದ ಆಪತ್ತು ಬರುತ್ತದೆ. ಎಲ್ಲೀ ನಿಮ್ಮ ರಾಜ? ನನ್ನ ಮಂತ್ರದಂಡ ಎಲ್ಲೀ?" ಎಂದು ಕೂಗುತ್ತ ಕರಡಿಯಿಂದ ಬಿಡಿಸಿಕೊಳ್ಳುತ್ತ ಸಿಕ್ಕಸಿಕ್ಕಲ್ಲಿ ಅದನ್ನು ಕಚ್ಚುತ್ತ ಉರುಡಾಡ ತೊಡಗಿದನು.

ಸುತ್ತಲೂ ಸೇರಿದ ಜನರು ಮರ್ಕಟನ ಮಾತುಗಳನ್ನು ಸ್ವಲ್ಪವೂ ಲಕ್ಷ್ಯಮಾಡದೆ, ಇದೊಂದು ಆಟವೆಂದೇ ಭಾವಿಸಿ, "ಅಹಾ! ಮಾತು ಕಲಿತ ಕೋತಿ! ಮೂಗ ಬಂಟ ಕರಡಿಗೂ ಕೋತಿಗೂ ಖಾಡಾಖಾಡೀ ಕುಸ್ತಿ! ಈ ಅದ್ಭುತ ಈವರೆಗೆ ನೋಡಿಲ್ಲ! ಭಲೇ ಭಲೇ!" ಎಂದು ಹೇಳುತ್ತ, ಶಿಳ್ಳು ಹಾಕುತ್ತ ಚಪ್ಪಾಳೆ ತಟ್ಟುತ್ತಲಿದ್ದರು. ಅಷ್ಟರಲ್ಲಿ ಅಲ್ಲಿಗೆ ಕುದುರೆಯ ಮೇಲೆ ವೇಗವಾಗಿ

ಕಾವಲು ಭಟರ ನಾಯಕನು ಬಂದು, "ಏನಿದು ನಿಮ್ಮ ಆಟ!" ಎಂದು ಗರ್ಜಿಸಿ ಕತ್ತಿ ಹಿರಿದು, ಸ್ವಲ್ಪ ದೂರದಲ್ಲಿ ನಿಂತಿದ್ದ ಪ್ರಾಣಿಗಳನ್ನಾಡಿಸುವವನನ್ನು ನೋಡಿ, "ಎಲೋ! ಕೋತಿವೇಷ ಹಾಕಿಕೊಂಡು ಬಂದ ಶತ್ರು ಗೂಢಚಾರಿ ಇವನು! ಇವನನ್ನು ನಿನ್ನ ಕರಡಿಯಿಂದ ಕೊಲ್ಲಿಸಲು ನೋಡುವೆಯಾ? ಜಾಗ್ರತೆ! ಮೊದಲು ಈ ಗೂಢಚಾರಿಯನ್ನು ಜೀವದೊಂದಿಗೆ ಹಿಡಿದು ಮಹಾರಾಜರ ಬಳಿಗೆ ಕರೆದುಕೊಂಡು ಹೋಗಬೇಕು! ಅವನ ಜೀವಕ್ಕೆ ಏನೂ ಆಗಬಾರದು!" ಎಂದನು.

ನಾಯಕನ ಮಾತನ್ನು ಕೇಳಿ ಪ್ರಾಣಿಗಳನ್ನು ಆಡಿಸುವವನು ಮುಂದಕ್ಕೆ ಹೋಗಿ ಕರಡಿಯ ಸಂಕಲಿಯನ್ನು ಹಿಡಿದು ಈಚೆಗೆ ಎಳೆದನು. ಕರಡಿ ಮರ್ಕಟನನ್ನು ಬಿಟ್ಟಿತು. ಮಾಯಾ ಮರ್ಕಟವು ತನ್ನ ಶರೀರಕ್ಕೆ ಉಂಟಾದ ಗಾಯಗಳಿಂದ ನರಳುತ್ತ, "ಎಂಥಾ ಹುಚ್ಚರು ನೀವೆಲ್ಲಾ! ನಿಮ್ಮ ರಾಜನನ್ನು ಆಪತ್ತಿನಿಂದ ಉಳಿಸಲು ಬಂದ ನನ್ನನ್ನು ಹೀಗೆಲ್ಲಾ ಅವಮಾನಪಡಿಸುವಿರಾ? ನಿಮಗೆಲ್ಲಾ ಜೀವದ ಮೇಲೆ ಆಶೆಯಿದ್ದರೆ ಓಡಿಹೋಗಿ ನಿಮ್ಮ ರಾಜನನ್ನು ನನ್ನ ಬಳಿಗೆ ಬರಲಿಕ್ಕೆ ಹೇಳಿ. ಎಲ್ಲಿ ನನ್ನ ಮಂತ್ರದಂಡ?" ಎಂದು ಕಣ್ಣು ತಿರುಗಿಸುತ್ತ ಸುತ್ತಲೂ ನೋಡಿದನು. ಮರ್ಕಟನ ಮಾತು ಕೇಳಿ ನಾಯಕನಿಗೆ ಬಹಳ ಸಿಟ್ಟು ಬಂತು. ಅವನು ಹಲ್ಲು ಕಡಿಯುತ್ತ, "ಎಲೋ ಶತ್ರು ಗೂಢಚಾರೀ! ನಮ್ಮ ಮಹಾರಾಜರು ನಿನ್ನ ಹತ್ತಿರ ಬರಬೇಕೆ? ನಿನಗೆ ಗರ್ವ ತಲೆಗೇರಿದೆ!" ಎಂದು ನುಡಿದು ಪ್ರಾಣಿಗಳನ್ನು ಆಡಿಸುವವನನ್ನು ನೋಡಿ, "ಎಲೋ ನಿನ್ನ ಕರಡಿಯಿಂದ ಈ ಕೋತಿರಾಯನನ್ನು ಹಿಡಿಯಿಸಿ, ಎಳೆಯಿಸಿಕೊಂಡು, ನನ್ನ ಹಿಂದೆ ಮಹಾರಾಜರ ಬಳಿಗೆ ಬಾ" ಎಂದು ಅಪ್ಪಣೆಮಾಡಿ ರಾಜಭವನದ ಕಡೆಗೆ ನಡೆಯತೊಡಗಿದನು.

"ಹೊರಿಸಿಕೊಂಡೇ ಬರುತ್ತೇನೆ ದೊರೆಗಳೇ" ಎಂದು ಹೇಳಿ ಪ್ರಾಣಿಗಳನ್ನು ಆಡಿಸುವವನು ತನ್ನ ಕರಡಿಗೆ ಸೈಗೆ ಮಾಡಿದನು. ಕರಡಿ ರಭಸದಿಂದ ಹೋಗಿ ಮಾಯಾ ಮರ್ಕಟನನ್ನು ಬಾಚಿ ಸುತ್ತಿ ಎತ್ತಿ ತನ್ನ ಹೆಗಲಿನ ಮೇಲೆ ಹಾಕಿಕೊಂಡು, ತನ್ನ ಒಡೆಯನ ಹಿಂದಿನಿಂದ ರಾಜಭವನದ ಕಡೆಗೆ ಹೊರಟಿತು. ಸುತ್ತಲೂ ಕೂಡಿದ ಜನರು ಅತ್ಯಂತ ಉತ್ಸಾಹದಿಂದ ಕೇ ಕೇ ಕೂಗುತ್ತ ಹಿಂದೆಯೇ ಸಾಗಿದರು.

ಮಾಯಾಮರ್ಕಟನು ಕರಡಿಯ ಹೆಗಲ ಮೇಲೆ ತುಳ್ಳಾಡುತ್ತ, "ತಾಂತ್ರಿಕ ಗುರೋ! ನೀವೇ ಕಾಪಾಡಬೇಕು! ನನ್ನ ಮಂತ್ರದಂಡ! ಮಂತ್ರದಂಡ!" ಎಂದು ಕೂಗುತ್ತಲೇ ಇದ್ದನು. —(ಇನ್ನೂ ಇದೆ)

